

ಮೈಸೂರು ವಿಶ್ವವಿದ್ಯಾನಿಲಯ

ಪ್ರಾಚ್ಯವಿದ್ಯಾಸಂಶೋಧನಾಲಯ ಗ್ರಂಥಮಾಲಾ – 221

# ಪ್ರೊ. ಎಚ್. ದೇವೀರಪ್ಪ

## ಬದುಕು – ಬರಹ

ಜೇನಹಳ್ಳಿ ಸಿದ್ಧಲಿಂಗಪ್ಪ





ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು, ೨೦೨೦

# ಪ್ರೊ. ಎಚ್. ದೇವೀರಪ್ಪ

(ಬದುಕು – ಬರಹ)

ಜೀನಹಳ್ಳಿ ಸಿದ್ಧಲಿಂಗಪ್ಪ

ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು
2020

ORIENTAL RESEARCH INSTITUTE SERIES - 221

# Prof. H. Devirappa


| | | |
|---|---|---|
| Publisher | : | Oriental Research Institute<br>UoM, Mysuru |
| Chief Editor | : | Dr. S. Shivarajappa<br>Director, ORI |
| Editor & | : | Sri. Jeenahalli Siddhalingappa |
| First Edition | : | 2020 |
| © Reserved | : | Oriental Research Institute<br>UoM, Mysuru |
| Size | : | 1/8th Demy |
| Copies | : | 500 |
| Pages | : | X + 110 |
| Price | : | Rs.210 |
| ISBN | : | 978-81-947382-2-0 |
| Printed at | : | Sri. S. Satish<br>Director<br>University Printing Press<br>Manasagangothri, Mysuru |

## ಕುಲಪತಿಗಳ ನುಡಿ

ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪನೆಯಾಗಿ ಒಂದು ನೂರು ವರ್ಷಗಳನ್ನು ಪೂರೈಸಿದ್ದು, ಶತಮಾನೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿದ ಸಂಭ್ರಮದಲ್ಲಿದ್ದೇವೆ. ವಿಶ್ವವಿದ್ಯಾನಿಲಯದ ಸಂಸ್ಥಾಪಕರಾದ ರಾಜರ್ಷಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ದೂರದೃಷ್ಟಿಗನುಗುಣವಾಗಿ ಉನ್ನತ ಶಿಕ್ಷಣವನ್ನು ನೀಡುತ್ತಾ, ಜ್ಞಾನಪ್ರಸಾರದ ಕೆಲಸವನ್ನು ಮಹೋನ್ನತವಾಗಿ ಮಾಡುವಲ್ಲಿ ವಿಶ್ವವಿದ್ಯಾನಿಲಯವು ಯಶಸ್ವಿಯಾಗಿದೆ.

ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ, ಜನಸಾಮಾನ್ಯರಿಗೂ ಜ್ಞಾನಪ್ರಸಾರ ಮಾಡುವ ಉನ್ನತವಾದ ಧ್ಯೇಯೋದ್ದೇಶದಿಂದ ೧೮೯೧ರಲ್ಲಿ ಮಹಾರಾಜ ೧೦ನೆಯ ಚಾಮರಾಜ ಒಡೆಯರ್‌ರವರಿಂದ ಸ್ಥಾಪನೆಯಾದ ಪ್ರಾಚ್ಯವಿದ್ಯಾ ಸಂಶೋಧನಾಲಯವು ಅಪರೂಪದ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ ಮತ್ತು ಸಂಪಾದನೆಯನ್ನು ಮಾಡಿಕೊಂಡು ಬರುತ್ತಿರುವುದು ಮುಂದಿನ ಪೀಳಿಗೆಗೆ ವರದಾನವಾಗಿದೆ. ಇದುವರೆಗೂ ೨೧೪ಕ್ಕೂ ಹೆಚ್ಚು ಅಪ್ರಕಟಿತ ಹಸ್ತಪ್ರತಿಗಳನ್ನು ಪ್ರಕಟಿಸಿದ ಕೀರ್ತಿ ಪ್ರಾಚ್ಯವಿದ್ಯಾ ಸಂಶೋಧನಾಲಯಕ್ಕೆ ಸಂದಿದೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ ಮತ್ತು ದೇಶ ವಿದೇಶಗಳ ಜ್ಞಾನಪಿಪಾಸುಗಳಿಗೆ ಅಗತ್ಯವಾಗಿರುವ ಹಸ್ತಪ್ರತಿಗಳು ಮತ್ತು ಅಪರೂಪದ ಗ್ರಂಥಗಳನ್ನು ಪರಾಮರ್ಶನೆಗಾಗಿ ಒದಗಿಸುವ ಜವಾಬ್ದಾರಿಯನ್ನು ಈ ಸಂಸ್ಥೆಯು ಪ್ರಾರಂಭದಿಂದಲೂ ಯಶಸ್ವಿಯಾಗಿ ನಿರ್ವಹಿಸುತ್ತಿರುವುದು ಅಭಿಮಾನದ ಸಂಗತಿಯಾಗಿದೆ. ವಿದ್ಯಾರ್ಥಿಗಳಲ್ಲಿ ಮತ್ತು ಜನಸಾಮಾನ್ಯರಲ್ಲಿ ಹಸ್ತಪ್ರತಿಗಳ ಬಗೆಗೆ ಅರಿವು ಮೂಡಿಸಲು ಹಸ್ತಪ್ರತಿ ಜಾಗೃತಿ ಕಾರ್ಯಕ್ರಮಗಳನ್ನು ಮತ್ತು ಕಾರ್ಯಾಗಾರಗಳನ್ನು ವಿಶ್ವವಿದ್ಯಾನಿಲಯದ ವ್ಯಾಪ್ತಿಗೊಳಪಟ್ಟ ವಿದ್ಯಾಸಂಸ್ಥೆಗಳಲ್ಲಿ ಹಮ್ಮಿಕೊಂಡಿರುವುದು ಹೆಗ್ಗಳಿಕೆಯ ವಿಷಯವಾಗಿದೆ. ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಾಗಿ ಡಾ.ಎಸ್.ಶಿವರಾಜಪ್ಪ ಅವರು ಅಧಿಕಾರ ವಹಿಸಿಕೊಂಡ ಅನಂತರ ಹತ್ತಾರು ಕ್ರಿಯಾ ಯೋಜನೆಗಳನ್ನು ರೂಪಿಸಿಕೊಂಡು, ಪ್ರಸ್ತುತ ಅಪ್ರಕಟಿತ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಗ್ರಂಥಗಳನ್ನು ಪ್ರಕಟಿಸುವ ಕೆಲಸಗಳನ್ನು ಹಮ್ಮಿಕೊಂಡಿರುವುದು ತುಂಬಾ ಸಂತೋಷದ ಸಂಗತಿಯಾಗಿದೆ.

ಇಂತಹ ಕ್ರಿಯಾಶೀಲ ಕೆಲಸಗಳು ನಿರಂತರವಾಗಿ ಸಾಗುತ್ತಾ ವಿಶ್ವವಿದ್ಯಾನಿಲಯಕ್ಕೆ ಕೀರ್ತಿ ತರುವಂತಾಗಲಿ ಎಂದು ಆಶಿಸುತ್ತೇನೆ.

ಶ್ರೀ ಜೀನಹಳ್ಳಿ ಸಿದ್ದಲಿಂಗಪ್ಪ ಇವರಿಂದ ಕನ್ನಡದಲ್ಲಿ ರಚಿಸಲ್ಪಟ್ಟ **'ಪ್ರೊ. ಎಚ್.ದೇವೀರಪ್ಪ ಬದುಕು-ಬರಹ'** ಎಂಬ ಗ್ರಂಥವು ಪ್ರಾಚ್ಯವಿದ್ಯಾ ಸಂಶೋಧನಾಲಯದ ಗ್ರಂಥಮಾಲೆಯ ೨೨೧ನೆಯ ಗ್ರಂಥವಾಗಿ ಪ್ರಕಟವಾಗುತ್ತಿರುವುದು ಸಂತೋಷದ ಸಂಗತಿಯಾಗಿದೆ. ಈ ಗ್ರಂಥದ ಪ್ರಧಾನ ಸಂಪಾದಕರು ಹಾಗೂ ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಾದ ಡಾ.ಎಸ್.ಶಿವರಾಜಪ್ಪ ಹಾಗೂ ಲೇಖಕರಾದ ಶ್ರೀ ಜೀನಹಳ್ಳಿ ಸಿದ್ದಲಿಂಗಪ್ಪ ಅವರನ್ನು ಅಭಿನಂದಿಸುತ್ತೇನೆ. ಈ ಗ್ರಂಥದ ಮುದ್ರಣ ಮತ್ತು ಮಾರಾಟದ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವ ಮುದ್ರಣಾಲಯ ಮತ್ತು ಪ್ರಸಾರಾಂಗದ ನಿರ್ದೇಶಕರುಗಳಾದ ಶ್ರೀ ಎಸ್. ಸತೀಶ್ ಮತ್ತು ಪ್ರೊ.ಎಂ.ಜಿ.ಮಂಜುನಾಥ ಅವರನ್ನೂ ಅಭಿನಂದಿಸುತ್ತೇನೆ.

**ಪ್ರೊ. ಜಿ. ಹೇಮಂತಕುಮಾರ್**
ಕುಲಪತಿಗಳು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

# ಮುನ್ನುಡಿ

ವಿದ್ವಾನ್ ಹೆಚ್. ದೇವೀರಪ್ಪ ಎಂದೊಡನೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯ ಹೆಸರು ತಟ್ಟನೆ ನೆನಪಾಗುತ್ತದೆ. ಕನ್ನಡ ಸಾಹಿತ್ಯದ ಸಂಶೋಧನಾ ಕ್ಷೇತ್ರಕ್ಕೆ ತಮ್ಮ ಜೀವನವನ್ನೇ ಮುಡುಪಾಗಿಟ್ಟ ವಿದ್ವಾಂಸರೆಂದರೆ ಅತಿಶಯೋಕ್ತಿಯೇನಲ್ಲ. ೨೦ನೇಯ ಶತಮಾನದ ನವೋದಯ ಸಾಹಿತ್ಯದ ದಿಗ್ಗಜರಲ್ಲಿ ಪ್ರಮುಖರಾದ ಪ್ರೊ. ಬಿ.ಎಂ. ಶ್ರೀಕಂಠಯ್ಯ, ಪ್ರೊ. ಟಿ. ಎಸ್. ವೆಂಕಣ್ಣಯ್ಯ, ಪ್ರೊ. ತೀ.ನಂ.ಶ್ರೀಕಂಠಯ್ಯ, ಪ್ರೊ.ಡಿ.ಎಲ್. ನರಸಿಂಹಾಚಾರ್ಯ, ಪ್ರೊ.ವಿ. ಸೀತಾರಾಮಯ್ಯ, ಶ್ರೀ ಎಂ. ಆರ್. ವರದಾಚಾರ್ಯರು ಮುಂತಾದ ಮಹನೀಯರನ್ನು ತಮಗೆ ಗುರುವಾಗಿ ಪಡೆದವರಿವರು. ಇವರಲ್ಲದೆ ಶ್ರೀ. ಕೆ ವೆಂಕಟರಾಮಪ್ಪ, ಶ್ರೀ. ಪ್ರಣತಾರ್ಥಿಹರನ್, ಶ್ರೀ. ಎ. ಆರ್. ಕೃಷ್ಣಶಾಸ್ತ್ರಿ, ಶ್ರೀ. ತಿರುಮಲೆ, ಶ್ರೀ ಎಂ.ವಿ.ಕೃಷ್ಣರಾವ್ ಇವರೂ ಕೂಡ ದೇವೀರಪ್ಪನವರಿಗೆ ಗುರುಗಳಾಗಿದ್ದವರು. ಇವರೆಲ್ಲರನ್ನೂ ದೇವೀರಪ್ಪನವರು ತಮ್ಮ ಬರಹದಲ್ಲಿ ನೆನಪಿಸಿಕೊಂಡಿರುತ್ತಾರೆ.

ದಿನಾಂಕ: ೦೬-೦೬-೧೯೧೩ ರಲ್ಲಿ ದಾವಣಗೆರೆ ಜಿಲ್ಲೆ ನ್ಯಾಮತಿ ತಾಲ್ಲೂಕಿನ (ಹಿಂದಿನ ಹೊನ್ನಾಳಿ ತಾಲ್ಲೂಕಿಗೆ ಸೇರಿದ ಭಾಗ) ಮಲ್ಲಿಗೇನಹಳ್ಳಿಯಲ್ಲಿ ಇವರು ಕರೀಗೌಡ್ರ ತೀರ್ಥಪ್ಪ ಮತ್ತು ಸಾವಿತ್ರಮ್ಮ ಕೃಷಿಕ ದಂಪತಿಗಳ ಪುತ್ರರಾಗಿ ಜನಿಸಿದರು. ಬಡ ಕುಟುಂಬದಲ್ಲಿ ಹುಟ್ಟಿ ಬಡತನದಲ್ಲೇ ಕಷ್ಟಗಳನ್ನು ಎದುರಿಸಿ ಅಕ್ಷರಭ್ಯಾಸ ಮಾಡಿ ಊರಿಗೆ ಮೊದಲ ಅಕ್ಷರಸ್ಥರಾಗಿದ್ದವರು. ಬೆಳಗುತ್ತಿ, ಶಿವಮೊಗ್ಗ, ದಾವಣಗೆರೆ, ಮೈಸೂರು, ಬೆಂಗಳೂರುಗಳಲ್ಲಿ ವ್ಯಾಸಂಗ ಮಾಡಿ ಎಂ.ಎ. ಪದವಿ ಗಳಿಸಿದರು. ಪ್ರಾಚ್ಯವಿದ್ಯಾ ಸಂಶೋಧನಾಯದಲ್ಲಿ ಕನ್ನಡ ಪದವೀಧರ ತಜ್ಞರಾಗಿ ಕೆಲಸಕ್ಕೆ ಸೇರಿ, ಅಲ್ಲಿಯೇ ಸಹಾಯಕ ನಿರ್ದೇಶಕರಾಗಿ, ನಿರ್ದೇಶಕರಾಗಿ ೧೯೪೦ ರಿಂದ ೧೯೬೬ ರವರೆಗೆ ದುಡಿದು ಅಲ್ಲಿಯೇ ನಿವೃತ್ತಿ ಹೊಂದಿದರು.

ಹೆಚ್.ದೇವೀರಪ್ಪನವರು ಪ್ರಾರಂಭದಲ್ಲಿ ೨ ಕಾದಂಬರಿ ೨ ನಾಟಕ ಹಾಗೂ ಒಂದು ಸಣ್ಣ ಕಥಾಸಂಕಲನಗಳನ್ನು ಹೊರತಂದು ಸೃಜನಶೀಲ ಬರಹಗಾರರಾಗಿ ಹೆಸರು ಮಾಡಿದರು. ಆದರೆ ಇವರ ಮನಸ್ಸು ಹಸ್ತಪ್ರತಿ ಸಂಗ್ರಹ, ಸಂಶೋಧನೆ, ಅಧ್ಯಯನಗಳ ಕಡೆ ಹೆಚ್ಚು ವಾಲಿದ ಕಾರಣ ಸಂಶೋಧನಾ ಕ್ಷೇತ್ರದಲ್ಲಿ ಅದ್ವಿತೀಯ ಸಾಧನೆ ಮಾಡಿದ ಪ್ರಮುಖರಲ್ಲೊಬ್ಬರೆನ್ನಿಸಿದರು. ಅದರಲ್ಲಿಯೂ ಶರಣ ಸಾಹಿತ್ಯದ ಬಗ್ಗೆ ಹೆಚ್ಚಿನ ಕೆಲಸ ಮಾಡಿ ಹರಿಹರಪ್ರಿಯರೆನಿಸಿಕೊಂಡರು. ಮುಖ್ಯವಾಗಿ ಪ್ರಾಚ್ಯವಿದ್ಯಾ ಸಂಶೋಧನಾಲಯಕ್ಕಾಗಿ ಹಗಲಿರುಳು ದುಡಿದು ಶ್ರಮಿಸಿದರು. ಓಲೆಗರಿಗಳ ಸಂಗ್ರಹ, ಹಸ್ತಪ್ರತಿಗಳ ಸಂಗ್ರಹ ಮಾಡಲು ಹಳ್ಳಿ ಹಳ್ಳಿ ಸುತ್ತಾಡಿದರು. ಕನ್ನಡ ಮತ್ತು ಸಂಸ್ಕೃತ ಹಸ್ತಪ್ರತಿ, ಓಲೆಗರಿಗಳನ್ನು ಸಂಗ್ರಹಿಸಿ ತಂದು ಸಂಸ್ಥೆಯ ಭಂಡಾರವನ್ನು ತುಂಬಿಸಿದರು. ಪ್ರಾಚೀನ ಕಾವ್ಯಗಳನ್ನು ಅಧ್ಯಯನಮಾಡಿ ಸಂಪಾದಿತ ಕೃತಿಗಳಿಗೆ ವಿದ್ವತ್‌ಪೂರ್ಣವಾದ ಪೀಠಿಕೆಗಳನ್ನು ಬರೆದು ಅಧ್ಯಯನಕಾರರಿಗೆ ದಾರಿದೀಪವಾದರು.

೧೯೩೫ ರಿಂದ ೧೯೫೪ ರವರೆಗೆ ಮೊದಲ ೨೦ ವರ್ಷಗಳ ಅವಧಿಯಲ್ಲಿ ಸಂಗ್ರಹಿಸಲಾದ ಹಸ್ತಪ್ರತಿಗಳೆಂದರೆ ಸಂಸ್ಕೃತ ೩೯೯, ಕನ್ನಡ ೨೯೯ ಒಟ್ಟು ೬೯೮ . ಈ ಅವಧಿಯಲ್ಲಾದ ಪುಸ್ತಕ ಪ್ರಕಟಣೆ ೩೦. ೧೯೫೪ ರಿಂದ ೧೯೬೬ ರವರೆಗೆ ಸಂಗ್ರಹಿಸಿದ ಹಸ್ತಪ್ರತಿಗಳೆಂದರೆ ಸಂಸ್ಕೃತ ೬೦೧೨ ಕನ್ನಡ ೮೨೭. ಒಟ್ಟು ೬೮೩೯. ಪುಸ್ತಕ ಪ್ರಕಟಿಸಿದ್ದು ೩೩. ದೇವೀರಪ್ಪನವರು ನಿರ್ದೇಶಕರಾದ ಅವಧಿಯಲ್ಲಿ ಸಾಕಷ್ಟು ಕೆಲಸ ಮಾಡಿ ಸಂಸ್ಥೆಯ ಏಳ್ಗೆಗೆ ಹಗಲಿರುಳು ಶ್ರಮಿಸಿದ್ದಾರೆ.

ಇಂತಹ ಅಪರೂಪದ ವಿದ್ವಾಂಸರಾದ ಶ್ರೀ ಹೆಚ್. ದೇವೀರಪ್ಪನವರನ್ನು ಕುರಿತು ಅದೇ ಭಾಗದ ಪಕ್ಕದ ಗ್ರಾಮದ ಸಾಹಿತಿಗಳೂ, ಚಿಂತಕರೂ ಆದ ಶ್ರೀ ಜೀನಹಳ್ಳಿ ಸಿದ್ದಲಿಂಗಪ್ಪನವರು ಒಂದು ಅರ್ಥಪೂರ್ಣ ಕೃತಿಯನ್ನು ಬರೆದುಕೊಟ್ಟಿದ್ದಾರೆ. ಹೆಚ್. ದೇವೀರಪ್ಪನವರೊಡನೆ ಹಲವಾರು ಸಂದರ್ಭದಲ್ಲಿ

ಭೇಟಿಯಾಗಿ ಸಂಗ್ರಹಿಸಿದ ಮಾಹಿತಿಗಳನ್ನು ಇಲ್ಲಿ ಕಲೆ ಹಾಕಿದ್ದಾರೆ. ದೇವೀರಪ್ಪನವರ ಬದುಕು-ಬರೆಹ ಕುರಿತು ಬರೆದ ವಿಶಿಷ್ಟ ಕೃತಿ ಇದಾಗಿದೆ.

ಮುಂದಿನ ಪೀಳಿಗೆಗೆ, ಯುವ ವಿದ್ವಾಂಸರಿಗೆ, ಅಧಿಕಾರಿಗಳಿಗೆ ಈ ಕೃತಿ ಮಾದರಿಯಾಗಬಲ್ಲದು. ದೇವೀರಪ್ಪನವರು ವೃತ್ತಿಯಲ್ಲಿ ಖ್ಯಾತ ಸಂಶೋಧಕರು, ಪ್ರವೃತ್ತಿಯಲ್ಲಿ ಸಾಹಿತಿಗಳೂ ಕೂಡ. ಜೊತೆಗೆ ಇವರ ಪ್ರಸಿದ್ಧ ಕಾದಂಬರಿಯಾದ 'ಬೆಳುವಲದ ಮಡಿಲಲ್ಲಿ' ಕೃತಿಯು ಪ್ರಖ್ಯಾತ ನಟರಾದ ಶ್ರೀ ರಾಜೇಶ್ ನಾಯಕತ್ವದಲ್ಲಿ ಸಿನಿಮಾ ಆಗಿ ತೆರೆಕಂಡಿರುವುದು ಶ್ಲಾಘನೀಯವಾದುದು. ಬದುಕಿನುದ್ದಕ್ಕೂ ಸಾಹಿತ್ಯ, ಸಂಸ್ಕೃತಿ ಚಿಂತನೆಗೈದ ವಿದ್ವಾನ್ ಹೆಚ್. ದೇವೀರಪ್ಪನವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸುದೀರ್ಘ ಕಾಲದ ಅನುಪಮ ಸೇವೆ ಸಲ್ಲಿಸಿದ್ದಾರೆ. ಇಂತಹ ಮಹಾ ಘನ ವಿದ್ವಾಂಸರನ್ನು ಕಣ್ಣಾರೆ ಕಂಡ ಶ್ರೀ ಜೇನಹಳ್ಳಿ ಸಿದ್ಧಲಿಂಗಪ್ಪನವರು ತುಂಬ ಅರ್ಥವತ್ತಾದ ಜೀವನ ಚರಿತ್ರೆಯ ಕೃತಿಯನ್ನು ನಮ್ಮ ಕೋರಿಕೆಯ ಮೇರೆಗೆ ಬರೆದು ಕೊಟ್ಟಿರುವುದು ನಮಗೆ ತುಂಬ ಸಂತೋಷವನ್ನುಂಟು ಮಾಡಿದೆ. ಇವರಿಗೆ ನಾನು ಮೊದಲು ಆಭಾರಿಯಾಗಿದ್ದೇನೆ.

ಈ ಎಲ್ಲ ಪ್ರಕಟಣೆಗೆ ಸ್ಫೂರ್ತಿದಾಯಕರು, ಮಾರ್ಗದರ್ಶಕರೂ ಆದ ನಮ್ಮ ಪ್ರೀತಿಯ ಕುಲಪತಿಗಳಾದ ಪ್ರೊ.ಜಿ.ಹೇಮಂತಕುಮಾರ್ ಅವರು ಬೆನ್ನುತಟ್ಟಿ ಪ್ರಕಟಿಸಲು ಪ್ರೋತ್ಸಾಹಿಸಿದ್ದಾರೆ. ಇವರಿಗೆ ಅನಂತಾನಂತ ಕೃತಜ್ಞತೆಗಳು ಹಾಗೂ ಮಾನ್ಯ ಕುಲಸಚಿವರಾದ ಪ್ರೊ. ಆರ್. ಶಿವಪ್ಪನವರು ನಮ್ಮನ್ನು ಪ್ರೋತ್ಸಾಹಿಸಿರುವುದು. ನಿಜಕ್ಕೂ ಶ್ಲಾಘನೀಯವಾದುದು. ಇವರಿಗೂ ಕೃತಜ್ಞತೆಗಳು ಸಲ್ಲಬೇಕು. ಅಂದವಾಗಿ ಮುದ್ರಿಸಿಕೊಟ್ಟ ಮೈಸೂರು ವಿ.ವಿ. ಮುದ್ರಣಾಲಯದ ನಿರ್ದೇಶಕರಾದ ಶ್ರೀ ಸತೀಶ್‌ರವರಿಗೆ ಆತ್ಮೀಯವಾದ ವಂದನೆಗಳು ಹಾಗೂ ಮುದ್ರಣಾಲಯದ ಎಲ್ಲ ಸಿಬ್ಬಂದಿವರ್ಗದವರಿಗೂ ವಂದನೆಗಳು ಸಲ್ಲಬೇಕು.

ಈ ಮಾದರಿ ವ್ಯಕ್ತಿಯ ಜೀವನಾದರ್ಶಗಳು ಮುಂದಿನ ಪೀಳಿಗೆಗೆ ಅನುಕರಣೀಯವಾಗಿರಲಿ ಎಂಬುದು ನಮ್ಮ ಮೂಲ ಆಶಯ. ಈ ಹಿನ್ನೆಲೆಯಲ್ಲಿ

ಈ ಕೃತಿ ಪ್ರಕಟಗೊಂಡಿದೆ. ಸಹೃದಯ ಓದುಗರು ಇದನ್ನು ಸದುಪಯೋಗ ಮಾಡಿಕೊಂಡು ಇಂತಹ ಘನವಿದ್ವಾಂಸರಂತೆ ಇಂದಿನ ಯುವಕರೂ ಕೂಡ ಬೆಳೆಯಬೇಕೆಂಬುದು ನನ್ನ ಮನದಾಳದ ಆಸೆ.

ಡಾ. ಎಸ್. ಶಿವರಾಜಪ್ಪ
ನಿರ್ದೇಶಕರು
ಪ್ರಾಚ್ಯವಿದ್ಯಾ ಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಲೇಖಕರ ಮಾತು

ಇಪ್ಪತ್ತನೆಯ ಶತಮಾನದ ಆರಂಭ ಹಾಗೂ ಅಂತ್ಯದ ಸ್ವಲ್ಪ ಭಾಗವನ್ನು ಹೊರತುಪಡಿಸಿ ಉಳಿದ ಅವಧಿಯಲ್ಲಿ ಬಾಳಿ ಬದುಕಿದ ಮಹಾನ್ ಚೇತನವೆಂದರೆ ಶ್ರೀಮಾನ್ ಎಚ್.ದೇವೀರಪ್ಪ. ೧೯೧೩-೧೯೮೮ ಇವರ ಕಾಲಾವಧಿ. 'ಬೆಳುವಲದ ನಾಡಾ'ದ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕಿನ ಮಲ್ಲಿಗೇನಹಳ್ಳಿ ಇವರ ಹುಟ್ಟೂರು. ಬಡ ಕೃಷಿಕ ದಂಪತಿಗಳಾದ ಕರೇಗೌಡ್ರ ತೀರ್ಥಪ್ಪ ಮತ್ತು ಸಾವಿತ್ರಮ್ಮ ಇವರ ಸುಪುತ್ರರಾಗಿ ಜನಿಸಿದರು. ಮನೆತನದ ಮೊದಲ ಅಕ್ಷರಸ್ಥರಾಗಿ ಓದು ಪ್ರಾರಂಭಿಸಿ ಬೆಳಗುತ್ತಿ, ಶಿವಮೊಗ್ಗ, ದಾವಣಗೆರೆ, ಬೆಂಗಳೂರು, ಮೈಸೂರುಗಳಲ್ಲಿ ವ್ಯಾಸಂಗ ಮಾಡಿ ಎಂ.ಎ ಪದವಿ ಪಡೆದರು. ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆ, ಮೈಸೂರು ಇಲ್ಲಿ ಕನ್ನಡ ಪದವೀಧರ ತಜ್ಞರಾಗಿ ಕೆಲಸಕ್ಕೆ ಸೇರಿ ಅಲ್ಲಿಯೇ ಸಹಾಯಕ ನಿರ್ದೇಶಕರಾಗಿ, ನಿರ್ದೇಶಕರಾಗಿ ೧೯೪೦ ರಿಂದ ೧೯೬೮ ರವರೆಗೆ ದುಡಿದು ನಿವೃತ್ತರಾದರು. ಇಡೀ ಬದುಕನ್ನು ಹಸ್ತಪ್ರತಿ, ಓಲೆಗರಿಗಳ ಸಂಗ್ರಹ, ಅಧ್ಯಯನ ಮಾಡಿ ಸಾಕಷ್ಟು ಪ್ರಾಚೀನ ಕಾವ್ಯ ಕೃತಿಗಳನ್ನು ಪ್ರಕಟಿಸಿದರು. ಕನ್ನಡ ಮತ್ತು ಸಂಸ್ಕೃತ ಹಸ್ತಪ್ರತಿ, ಓಲೆಗರಿಗಳನ್ನು ನಾಡಿನುದ್ದಕ್ಕೂ ಸಂಚರಿಸಿ ತಂದು ಸಂಸ್ಥೆಯ ಗ್ರಂಥ ಭಂಡಾರಕ್ಕೆ ಸೇರಿಸಿ ದಾಖಲಿಸಿದರು. ಉಸಿರಿರುವತನಕವೂ ಸಂಶೋಧನ ಕಾರ್ಯದಲ್ಲಿಯೇ ಕೆಲಸಮಾಡಿ ಸಂಪಾದಿತ ಪುಸ್ತಕಗಳಿಗೆ ಸುದೀರ್ಘವಾದ 'ಪೀಠಿಕೆ'ಗಳನ್ನು ಬರೆದು ಅಧ್ಯಯನಕ್ಕೆ ದಾರಿದೀಪವಾದರು. ಜೊತೆಗೆ ನೂರಾರು ಸಂಶೋಧನ ಲೇಖನಗಳನ್ನು ಬರೆದು ವಿದ್ವಜ್ಜನರ ಪ್ರೀತಿಗೆ ಪಾತ್ರರಾದರು. ಪ್ರಾರಂಭದಲ್ಲಿ ಸೃಜನಶೀಲ ಕೃತಿಗಳನ್ನು ಬರೆದಿರುವ ಇವರು ಒಂದು ಸಣ್ಣ ಕಥಾಸಂಕಲನ, ಎರಡು ಕಾದಂಬರಿಗಳು, ಎರಡು ನಾಟಕಗಳನ್ನು ಬರೆದು ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಕನ್ನಡ ಸಾಹಿತ್ಯಲೋಕಕ್ಕೆ ಸಮರ್ಪಿಸಿದ್ದಾರೆ.

ಇಂತಹ ಮಹಾನ್ ಸೃಜನಶೀಲ ಕಥೆ, ಕಾದಂಬರಿ ಹಾಗೂ ನಾಟಕಕಾರ, ಸಂಶೋಧನ ದಿಗ್ಗಜ, ಶರಣ ಚೈತನ್ಯ, ಹರಿಹರಪ್ರಿಯ ದೇವೀರಪ್ಪನವರನ್ನು ಕುರಿತು ಜೀವನ-ಕೃತಿ-ಪರಿಚಯ ಪುಸ್ತಕವನ್ನು ಬರೆದುಕೊಡಲು

ಎಚ್. ದೇವೀರಪ್ಪನವರ ಮಕ್ಕಳಾದ ಶ್ರೀಮತಿ ಎಚ್.ಡಿ. ಗೀತಾ, ಶ್ರೀಮತಿ ಎಚ್.ಡಿ. ಶಾಂತ, ಶ್ರೀಮತಿ ಎಚ್.ಡಿ. ಗೌರು ಶ್ರೀ ಎಚ್.ಡಿ. ಶ್ರೀನಾಗೇಶ್ ಹಾಗೂ ಅವರ ಅಳಿಯಂದಿರಾದ ಡಾ. ಪಿ. ಬಸಪ್ಪ, ಶ್ರೀ ನಾಗಭೂಷಣ ಮತ್ತು ಶ್ರೀ ಎಚ್.ಡಿ. ಶ್ರೀನಾಗೇಶರ ಪತ್ನಿ ಶ್ರೀಮತಿ ನಿರುಪಮ ಇವರೆಲ್ಲರೂ ಸಾಕಷ್ಟು ಮಾಹಿತಿಗಳನ್ನು ನೀಡಿ ನೆರವಾಗಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು ಸಲ್ಲುತ್ತವೆ. ಮುಖ್ಯವಾಗಿ ಎಚ್. ದೇವೀರಪ್ಪನವರು ನಿಧನರಾಗುವ ಸ್ವಲ್ಪ ದಿನಗಳ ಮುಂಚೆ ನನಗೆ ನೀಡಿದ್ದ ೨೦-೮-೧೯೭೩ ರಲ್ಲಿ ಬರೆದಿಟ್ಟಿದ್ದ ಅವರ ಜೀವನ-ಕೃತಿ ಪರಿಚಯದ ಅನೇಕ ಘಟನೆಗಳ ವಿವರಗಳನ್ನು ಆಧರಿಸಿ ಇಂತಹದೊಂದು ವ್ಯಕ್ತಿ ಚಿತ್ರಣ ಕೃತಿ ಬರೆಯಲು ಸಾಧ್ಯವಾಗಿದೆ. ಅನೇಕ ಭಾರಿ ಅವರೊಂದಿಗೆ ಚರ್ಚಿಸುತ್ತಿದ್ದ ಸಂದರ್ಭದಲ್ಲಿನ ಮಾತುಗಳೂ ಇಲ್ಲಿ ಅಡಕಗೊಂಡಿವೆ. ಎಚ್. ದೇವೀರಪ್ಪನವರು ನಮ್ಮ ಊರಿನವರೆಂದೇ ನನಗೆ ಅಭಿಮಾನ, ವಿಶ್ವಾಸಗಳಿರುವುದರಿಂದ ಅವರನ್ನು ತುಂಬು ಹೃದಯದಿಂದ ಗೌರವಿಸುತ್ತೇನೆ. ಅವರ ಎರಡು ಕಾದಂಬರಿಗಳಂತೂ ನನಗೆ ತುಂಬಾ ಪ್ರಭಾವ ಬೀರಿವೆ. ನಮ್ಮ ಭಾಗದ ಭಾಷೆಯ ಬನಿ, ಸೊಗಡು, ಮಾತು ಸದಾಕಾಲ ನೆನಪಿನಲ್ಲಿರುವಂತೆ ಮನದಲ್ಲಿ ಅಚ್ಚೊತ್ತಿವೆ.

ಈ ಕೃತಿಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ವತಿಯಿಂದ ಪ್ರಕಟಿಸಲು ಮುಂದೆಬಂದ ಓ.ಆರ್.ಐ ನ ನಿರ್ದೇಶಕರಾದ ಶ್ರೀ ಎಸ್. ಶಿವರಾಜಪ್ಪನವರಿಗೆ ಹಾಗೂ ಪ್ರಸಾರಾಂಗದ ನಿರ್ದೇಕರಾದ ಶ್ರೀ ಎಂ.ಜಿ. ಮಂಜುನಾಥ್ ಮತ್ತು ಮುದ್ರಣಾಲಯ ವಿಭಾಗದ ನಿರ್ದೇಕರಾದ ಎ.ಸ್. ಸತೀಷ್ ರವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಇಂತಹದೊಂದು ಕೃತಿಯನ್ನು ಸಹೃದಯ ಅಭಿಮಾನಿಗಳೆಲ್ಲರೂ ಸ್ವೀಕರಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು

ಜೀನಹಳ್ಳಿ ಸಿದ್ಧಲಿಂಗಪ್ಪ

## ಮಲ್ಲಿಗೇನಹಳ್ಳಿ ಮಲ್ಲಿಗೆ ಎಚ್. ದೇವೀರಪ್ಪ

ತಾಲ್ಲೂಕು :

'ಹೊನ್ನಾಳಿ' ಎಂದೊಡನೆ ತಟ್ಟನೆ ನೆನಪಿಗೆ ಬರುವ ಜಿಲ್ಲೆಯ ಹೆಸರು ಶಿವಮೊಗ್ಗ. ಮೊದಲಿನಿಂದಲೂ ದಾವಣಗೆರೆ ಲೋಕಸಭಾ ಕ್ಷೇತ್ರಕ್ಕೆ ಒಳಪಟ್ಟಿದ್ದ ಹೊನ್ನಾಳಿಯು ಆಗಿನ ಮುಖ್ಯಮಂತ್ರಿ ಆಗಿದ್ದ ಸನ್ಮಾನ್ಯ ಶ್ರೀ ಜೆ.ಹೆಚ್. ಪಟೇಲರು ೧೯೯೭ರ ಆಗಸ್ಟ್ ೧೫ರಂದು ದಾವಣಗೆರೆ ಜಿಲ್ಲೆಯನ್ನು ಹೊಸ ಜಿಲ್ಲೆಯನ್ನಾಗಿ ಘೋಷಿಸಿದ ಪರಿಣಾಮವಾಗಿ ಹೊನ್ನಾಳಿ ಸಂಪೂರ್ಣವಾಗಿ ದಾವಣಗೆರೆ ಜಿಲ್ಲಾಡಳಿತಕ್ಕೆ ಒಳಪಟ್ಟಿತು. ಪ್ರತಿಯೊಬ್ಬರ ಮನಸ್ಸು ಶಿವಮೊಗ್ಗಕ್ಕೇ ಅಂಟಿಕೊಂಡಿದ್ದರೂ ಹೃದಯ ದಾವಣಗೆರೆ ಜಿಲ್ಲೆಯಲ್ಲಿ ಸೇರ್ಪಡೆಗೊಂಡಿತು. ಏನೇ ಹೋರಾಟ, ಪ್ರತಿಭಟನೆಗಳು ನಡೆದರೂ ಹೊನ್ನಾಳಿಯನ್ನು ದಾವಣಗೆರೆ ಜಿಲ್ಲೆಯ ಅಂಗವಾಗಿ ಒಪ್ಪಿಕೊಂಡದ್ದಾಯಿತು.

ಹೊನ್ನಾಳಿ ತಾಲ್ಲೂಕಿನ ಪೂರ್ವದಲ್ಲಿ ಚನ್ನಗಿರಿ, ದಕ್ಷಿಣದಲ್ಲಿ ಶಿವಮೊಗ್ಗ, ಪಶ್ಚಿಮದಲ್ಲಿ ಶಿಕಾರಿಪುರ ಮತ್ತು ಹಾವೇರಿ ಜಿಲ್ಲೆಯ ಹಿರೇಕೆರೂರು, ಉತ್ತರದಲ್ಲಿ ಹರಿಹರ ಮತ್ತು ದಾವಣಗೆರೆ ತಾಲ್ಲೂಕುಗಳು ಸುತ್ತುವರಿದಿವೆ. ಇಲ್ಲಿ ಆರು ಹೋಬಳಿ ಕೇಂದ್ರಗಳಿವೆ: ಕಸಬಾ (ಹೊನ್ನಾಳಿ), ಬೆಳಗುತ್ತಿ, ಸಾಸ್ವೆಹಳ್ಳಿ, ೧,೨, ಗೋವಿನಕೋವಿ ೧,೨. ಈ ತಾಲ್ಲೂಕಿನಲ್ಲಿ ಹರಿಯುವ ಪ್ರಮುಖ ನದಿ ತುಂಗಭದ್ರಾ.

ಹೊನ್ನಾಳಿಗೆ ಹಿಂದೆ ಬಿದಿರಹಳ್ಳಿ, ಹೊನ್ನೆರಳೆ, ಹೊನ್ನರಳಿ, ಸುವರ್ಣಪುರ ಎಂಬ ಹೆಸರುಗಳಿದ್ದುವೆಂಬ ಬಗ್ಗೆ ಅನೇಕ ದಂತಕಥೆಗಳಿವೆ. ಶಾಸನಗಳಲ್ಲಿ ಉಲ್ಲೇಖಿತವಾಗಿರುವಂತೆ 'ಬಿದರೆ' 'ಒನ್ನಾಳೆ', 'ಒನಳೆ' 'ಉಂಹಳ್ಳಿ' 'ವೊಂನಾಳೆ' 'ಹೊಂನಾಳೆ' ಪದಗಳು 'ಹೊನ್ನಾಳಿ' ಬಗೆಗಿನ ಮೂಲ ಸ್ವರೂಪಗಳನ್ನು ತಿಳಿಯುಪಡಿಸುತ್ತವೆ. 'ಹೊನ್ನಾಳಿ' ಎಂಬುದು ಪ್ರಸ್ತುತ ಚಾಲ್ತಿಯಲ್ಲಿ ಉಳಿಮಕೊಂಡು ಬಂದಿದೆ. ಈ ತಾಲ್ಲೂಕಿನ ಕುದುರೆಕೊಂಡ, ಪಲವನಹಳ್ಳಿ ಭಾಗದಲ್ಲಿ ಚಿನ್ನದೊರಕುತ್ತಿರುವುದರ ಬಗ್ಗೆಯೂ ಶೋಧನೆ ನಡೆದಿದೆ. ಆದರೆ ಚಿನ್ನ ತೆಗೆಯುವ ಕೆಲಸ ನಡೆದರೂ ಲಾಭದಾಯಕವಾಗಿಲ್ಲವೆಂದು

ಕೈಬಿಡಲಾಗಿದೆ. ಹೊನ್ನಾಳಿ ಎಂಬ ಹೆಸರೂ ಕೂಡ ಇದರೊಂದಿಗೂ ತಳಕು ಹಾಕಿಕೊಂಡಂತೆ ಕಂಡುಬರುತ್ತದೆ.

**ಹೋಬಳಿ :**

ಹೊನ್ನಾಳಿ ತಾಲ್ಲೂಕಿನ ಪ್ರಮುಖ ಹೋಬಳಿ ಕೇಂದ್ರಗಳಲ್ಲಿ ಬೆಳಗುತ್ತಿಯೂ ಒಂದು. ಹೊನ್ನಾಳಿಯಿಂದ ಪಶ್ಚಿಮಕ್ಕೆ ೧೬ ಕಿ.ಮೀ. ದೂರದಲ್ಲಿದೆ. ಕಲ್ಯಾಣದ ಚಾಳುಕ್ಯರಿಗೆ, ಹೊಯ್ಸಳರಿಗೆ, ಸೇವುಣರಿಗೆ, ರಾಷ್ಟ್ರಕೂಟರಿಗೆ ಸಾಮಂತರಾಗಿ ಮಾಂಡಲೀಕರಾಗಿ ಸೇಂದ್ರಕವಂಶದ ಸಿಂಧರು ಬೆಳಗುತ್ತಿ ಸಿಂಧರಾಗಿ ಆಳುತ್ತಿದ್ದರೆಂಬುದನ್ನು ಇಲ್ಲಿನ ಅನೇಕ ಶಾಸನಗಳಿಂದ ಹಾಗೂ ಅನಂತರ ವಿಜಯನಗರದ ಅರಸರಡಿಯಲ್ಲಿ ಒಂದು ಅರಸು ಮನೆತನವೂ ಸ್ವತಂತ್ರವಾಗಿ ಆಳಿರುವುದಾಗಿ ಹಲವು ಕೈಫಿಯತ್ತುಗಳು ತಿಳಿಸುತ್ತವೆ. ಆದರೆ ಈಗ ಬೆಳಗುತ್ತಿ ಹಿಂದಿನಂತೆ ಕಂಡುಬರುತ್ತಿಲ್ಲ. ಹಾಳು ಹಂಪೆಯ ತರಹ ಹಲವಾರು ಅವಶೇಷಗಳನ್ನು ಎದೆಯಲ್ಲಿಟ್ಟುಕೊಂಡು ಹಳೆಯ ನೆನಪನ್ನಷ್ಟೇ ತಂದು ಕೊಡುತ್ತದೆ.

> ಸಿಂಧರಾ ಬೆಳಗುತ್ತಿ ಸಿಗದೆದ್ದು ಹೋಗಿ
> ಜೊಹಳೆ ಅರಸುತನದಲ್ಲಿ ಜೋಳಾಗಿ ಹೋಗಿ
> ಹೊನ್ನಾಳಿ ತಾಲ್ಲೂಕಿನಲಿಂದು ಹೋಬಳಿಯಾಗಿ
> ಬೆಳಗುತಿಹುದು ಬೆಳಗುತ್ತಿ ಬೆಳುವಲದ ಮಡಿಲಲ್ಲಿ–

–ಎಂಬಂತಾಗಿದೆ.

'ಬೆಳುವಲದ ಮಡಿಲಲ್ಲಿ' ಎಂಬ ಮಾತನ್ನು ಗಮನಿಸುವಾಗ ನಮಗೆ ಕಲೆ, ಸಾಹಿತ್ಯ, ಸಂಸ್ಕೃತಿ, ಸಂಗೀತ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ತಾಲ್ಲೂಕಿನ ಹಿರಿಮೆಯನ್ನು ಎತ್ತಿಹಿಡಿದ ಜನಪದ ಕಲಾವಿದರು, ಸಾಹಿತಿಗಳು, ಕವಿಗಳು, ಸಂಶೋಧಕರು, ವಿದ್ವಾಂಸರು ಮೊದಲಾದವರು ತಟ್ಟನೆ ನೆನಪಾಗುತ್ತಾರೆ. ಹೊನ್ನಾಳಿ ತಾಲೂಕಿನ ಬಹುತೇಕ ಗ್ರಾಮಗಳು ಕಲೆ, ಸಾಹಿತ್ಯ, ಸಂಸ್ಕೃತಿ, ಸಂಗೀತ, ಶಿಕ್ಷಣಗಳ ನೆಲೆವೀಡಾಗಿ ಹಿಂದಿನಿಂದಲೂ ತಮ್ಮದೇ ಆದ ಛಾಪನ್ನು ಮೂಡಿಸಿಕೊಂಡು ಬಂದಿವೆ. ಕರಡಿಮಜಲು, ಕಾಳಿ ಊದುವಿಕೆ, ಕೀಲು ಕುದುರೆ, ಕುಸ್ತಿ, ಕೋಲಾಟ, ಕೋಲಿನಮೇಳ, ಡೊಳ್ಳು ಬಾರಿಸುವಿಕೆ, ಪುರವಂತಿಕೆ ಮತ್ತು ವೀರಗಾಸೆ, ಪುರಾಣಪ್ರವಚನ, ಹರಿಕಥೆ, ಕೀರ್ತನೆ, ರಂಗಕಲೆ, ಶಹನಾಯ್‌ವಾದನ, ಶಿಲ್ಪಕಲೆ, ಸಾಹಸ, ಹಲಗೆ ಬಾರಿಸುವಿಕೆ ಮುಂತಾದ ಕಲೆಗಳ ಕಲೆಗಾರರು ಇಲ್ಲಿ ಸಾಕಷ್ಟು

ಕಂಡುಬರುತ್ತಾರೆ. ಕವಿ, ಕಥೆಗಾರ, ಸಂಶೋಧಕ, ನಾಟಕಕರ್ತೃ, ಗಣಿತಜ್ಞ, ವಿಮರ್ಶಕ, ಸಿನಿಮಾನಿರ್ದೇಶಕ, ಪಂಡಿತ ಮೊದಲಾದವರು ತಾಲ್ಲೂಕಿನ ಎಲ್ಲೆಡೆಯೂ ಹುಟ್ಟಿ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ತಬಲ, ಹಾರ್ಮೋನಿಯಂ, ಭಜನೆ, ಲಾವಣಿ, ಸವಾಲು, ಲಂಬಾಣಿ ಮುಂತಾದ ಸಂಗೀತ ಪ್ರಕಾರಗಳಲ್ಲಿನ ಕಲಾವಿದರು, ವಿದ್ವನ್ಮಣಿಗಳು ಈ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಇಂತಹ ಒಂದು ಅಪರೂಪದ 'ಬೆಳುವಲದ ನಾಡಿನ' ಮಣ್ಣಿನ ಬದುಕಿನಲ್ಲಿ ಹುಟ್ಟಿ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಧ್ರುವತಾರೆಯಂತೆ ಬೆಳಗಿ, ನಾಡಿನುದ್ದಕ್ಕೂ ಸಂಶೋಧನೆಯ ಗಂಧಚೆಲ್ಲಿ, ಮಲ್ಲಿಗೆಯ ಪರಿಮಳ ಸೂಸುತ್ತಿರುವ ಮಹನೀಯರೊಬ್ಬರನ್ನು ನಾವಿಲ್ಲಿ ಸ್ಮರಿಸಿಕೊಳ್ಳಲೇಬೇಕಿದೆ. ಅವರೇ ನಮ್ಮ ಕನ್ನಡ ಸಾರಸ್ವತಲೋಕದ, ಸಂಶೋಧನಾ ದಿಗ್ಗಜರಾದ 'ಮಲ್ಲಿಗೇನಹಳ್ಳಿ ಮಲ್ಲಿಗೆ ಎಚ್. ದೇವೀರಪ್ಪ'ನವರು.

ಊರು :


ಎಚ್. ದೇವೀರಪ್ಪ

'ಮಲ್ಲಿಗೇನಹಳ್ಳಿ' ಎಂಬ ಹೆಸರೇ ಸುಂದರ ಹೂವಿನ ಘಮಘಮಿಸುವ ಪರಿಮಳವನ್ನು ಸೂಸುವ ಹಳ್ಳಿ ಎನ್ನುವಷ್ಟು ಸೊಗಡನ್ನು ತುಂಬಿ ಕೊಂಡಂತಹುದು. ಹೊನ್ನಾಳಿಯ ಪಶ್ಚಿಮಕ್ಕೆ ೧೫ ಕಿ.ಮೀ. ದೂರ ದಲ್ಲಿರುವ ಈ ಹಳ್ಳಿ ಮೊದಲಿಗೆ ಮಲ್ಲಿಗೆ ಹೂವಿನ ಕೇಂದ್ರವಾಗಿತ್ತೋ ಎಂಬ ಬಗ್ಗೆ ಸಂಶಯ ಬಾರದಿರದು. ಆದರೆ 'ಮಲ್ಲಿಗೆಯತಾಣ ಮಲ್ಲಿಗೇನಹಳ್ಳಿ' ಎಂಬುದಕ್ಕೆ ಪುರಾವೆ ದೊರಕಲಾರದು. ಹೇಗಿದ್ದರೂ ಶ್ರೀ ಎಚ್. ದೇವೀರಪ್ಪ ನವರಿಂದ ಮಲ್ಲಿಗೇನಹಳ್ಳಿ ಸಾಹಿತ್ಯ ಕ್ಷೇತ್ರದಲ್ಲಿ 'ಮಲ್ಲಿಗೆಹಳ್ಳಿ'ಯಾಗಿ ಅಚ್ಚಳಿಯದೆ ಉಳಿದದ್ದು ನಿಜಕ್ಕೂ ದಾಖಲೀಯವಾದುದು. ಇಂಥ ಮಲ್ಲಿಗೇನಹಳ್ಳಿ ತನ್ನ ಕಪ್ಪೊಡಲಿನಿಂದ ಎಚ್. ದೇವೀರಪ್ಪನರಂಥ ಸಾಹಿತ್ತಿಕ,

ಸಂಶೋಧಕ ದಿಗ್ಗಜರನ್ನು ಈ ನಾಡಿಗೆ ಕೊಟ್ಟಿರುವುದು ತುಂಬಾ ಹೆಮ್ಮೆಯ ಸಂಗತಿ. ಮಲ್ಲಿಗೇನಹಳ್ಳಿಯ ಒಂದು ಸುಂದರ ಘಮ ಘಮಿಸುವ ಹೂವು ಈ 'ಮಲ್ಲಿಗೇನಹಳ್ಳಿ ಮಲ್ಲಿಗೆ ಎಚ್ ದೇವಿರಪ್ಪ'. ತನ್ನ ಪರಿಮಳದ ಕಂಪನ್ನು ಈ ನೆಲದ ಮಣ್ಣಿನೊಡನೆಯೇ ಹಿಡಿದಿಟ್ಟ ಚೇತನ ಇವರು. ಹೊನ್ನಾಡಿನ ಗ್ರಾಮೀಣ ಬದುಕು ಸಾಹಿತ್ಯ ಲೋಕವನ್ನು 'ಬೆಳುವಲದ ಮಡಿಲಾ'ಗಿ ಪ್ರವೇಶಿಸಿ, ಇಡೀ 'ಹಳ್ಳಿಯ ಬದುಕ'ನ್ನು 'ತುಂಗಭದ್ರಾ' ನದಿ ದಂಡೆಯಲ್ಲಿ 'ಕಲಾಯೋಗಿ'ಯ ತಪಸ್ಸಿನ ಮೂಲಕ 'ಸುವರ್ಣ ಸಂಪುಟ'ದಲ್ಲಿ ಬರೆದಿಟ್ಟಂತೆ ಅನಾವರಣಗೊಂಡಿದೆ.

ಮಲ್ಲಿಗೇನಹಳ್ಳಿ ಎಂಬ ಹೆಸರಿನ ಹಿಂದೆ ದಂತಕತೆಯೊಂದು ಸ್ಥಳನಾಮದ ಹಿನ್ನೆಲೆಯಲ್ಲಿ ಪ್ರಚಲಿತವಲ್ಲಿದ್ದಂತೆ ಕಂಡುಬರುತ್ತದೆ. ಪಂಚಪಾಂಡವರು ವನವಾಸ ಮಾಡುತ್ತಿದ್ದ ಕಾಲದಲ್ಲಿ ಇಲ್ಲಿನ ಚಿನ್ನಿಕೋಲುಮಟ್ಟಿಯಲ್ಲಿ ಕೆಲವು ಕಾಲ ವಿಶ್ರಮಿಸಿಕೊಂಡಿದ್ದರಂತೆ. ಆ ಸಂದರ್ಭದಲ್ಲಿ ಅವರು ಚಿನ್ನಿದಾಂಡು ಆಟವಾಡುವಾಗ ಭೀಮನು ಹೊಡೆದ ಹೊಡೆತಕ್ಕೆ ದಾಂಡು ಹಾರಿಹೋಗಿ ನ್ಯಾಮತಿ ಕೆರೆಗೆ ಬಿದ್ದಿತೆಂದೂ, ಅದನ್ನು ಹುಡುಕುತ್ತಾ ಬರುವಾಗ ಬೆಳಗಾಗಿ ಹೋಯಿತಂತೆ. ಅಲ್ಲಿ ತಲುಪಿದ ಗ್ರಾಮಕ್ಕೆ ಬೆಳಗಾವತಿ (ಈಗಿನ ಬೆಳಗುತ್ತಿ) ಎಂಬ ಹೆಸರನ್ನಿಟ್ಟು ಮುಂದೆ ಹೋದರಂತೆ. ಹಾಗೆಯೇ ಸ್ವಲ್ಪದೂರ ಸಾಗುವಷ್ಟರಲ್ಲಿ ಮಲ್ಲಿಗೆಯ ಪರಿಮಳ ಅವರನ್ನು ಸ್ವಾಗತಿಸಿದ್ದಕ್ಕೆ ಆಕರ್ಷಿತರಾಗಿ ಆ ಗ್ರಾಮಕ್ಕೆ 'ಮಲ್ಲಿಗೇನಹಳ್ಳಿ' ಎಂದು ಹೆಸರಿಟ್ಟು ಕರೆದರಂತೆ ಎಂಬ ಪ್ರತೀತಿ ಇರುವುದು ಕಂಡುಬರುತ್ತದೆ. ಈ ಗ್ರಾಮಕ್ಕೆ ಪ್ರತ್ಯೇಕ ಗಡಿ ರೇಖೆ ಇಲ್ಲದ ಕಾರಣ ಬೆಳಗುತ್ತಿಯ ಗಡಿಯೊಳಗೆ ಈ ಹಳ್ಳಿಯೂ ಸೇರಿಹೋಗಿರುವುದನ್ನು ಕಾಣಬಹುದಾಗಿದೆ.

'ಮಲ್ಲಿಗೇನಹಳ್ಳಿ' ಹೆಸರಿನ ಹಿಂದೆ ಇರುವ ರೂಪದ ಬಗ್ಗೆ ಎಚ್. ದೇವೀರಪ್ಪನವರೂ ಸಹ ತಮ್ಮ ಜೀವನ ಚರಿತ್ರೆಯ ಕೆಲವು ಘಟನೆಗಳನ್ನು ಬರೆದಿಟ್ಟ ಹಸ್ತಪ್ರತಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ : "ಹೊನ್ನಾಳಿ ತಾಲ್ಲೂಕು ಬೆಳಗುವರ್ತಿಯ ಮುಜುರೆ ಗ್ರಾಮ ಇದು. ಸಿಂಧುವಂಶದ ಮಲ್ಲರಸನ ಹೆಸರಿನಲ್ಲಿ ಆ ಊರಿಗೆ ಹುಗ್ಗಿ ಹೊಯ್ದದ್ದು. 'ಮಲ್ಲುಗ' (ಮಲ್ಲಿಗಯ್ಯ) ಎಂಬುದರ ಮುಂದೆ 'ಹಳ್ಳಿ' ಸೇರಿ 'ಮಲ್ಲುಗನಹಳ್ಳಿ' ಆಗಿರಬೇಕು, ಇಲ್ಲವೇ 'ಮಲ್ಲಿಗಾವುಂಡನ ಹಳ್ಳಿ' ಆಯಿತೋ ತಿಳಿಯದು" ಎಂದಿದ್ದಾರೆ. ಒಟ್ಟಿನಲ್ಲಿ ಮಲ್ಲುಗನ ಹಳ್ಳಿ – ಮಲ್ಲಿಗಾನಹಳ್ಳಿ–ಮಲ್ಲಿಗನಹಳ್ಳಿ–ಮಲ್ಲಿಗೇನಹಳ್ಳಿಗೆ ಮೂಲವಾಗಿರಲು ಸಿಂಧುವಂಶದ ಮಲ್ಲರಸನೂ ಕಾರಣ ಎಂಬುದು ಇದರಿಂದ

ತಿಳಿದುಬರುತ್ತದೆ, ಹಾಗೂ ಈ ಹಳ್ಳಿಗೆ ಐತಿಹಾಸಿಕವಾಗಿಯೂ ಪ್ರಾಮುಖ್ಯತೆಯಿರುವುದು ಸ್ಪಷ್ಟವಾಗುತ್ತದೆ. ಕಪ್ಪು ಮಣ್ಣಿನ ಫಲವತ್ತಾದ ಬೆಳುವಲದ ಮಡಿಲ ಭೂಮಿಯನ್ನು ಹೊಂದಿರುವ ಈ ಭಾಗ ಗಟ್ಟಿ ಬೆಳೆಗಳಿಗೆ ಆಯಕಟ್ಟಾದ ಪ್ರದೇಶವಾಗಿರುವುದು ನಮಗೆಲ್ಲರಿಗೂ ತಿಳಿದುಬರುವ ಸಂಗತಿ.

ಮಲ್ಲಿಗೇನಹಳ್ಳಿಯ ಪೂರ್ವಕ್ಕೆ ಕೆಂಚಿಕೊಪ್ಪ, ಆರುಂಡಿ ಗ್ರಾಮಗಳು, ಉತ್ತರಕ್ಕೆ ಜೀನಹಳ್ಳಿ, ಗುಡ್ಡೆಹಳ್ಳಿ, ಅರಳಹಳ್ಳಿ ಗ್ರಾಮಗಳು ಪಶ್ಚಿಮಕ್ಕೆ ಬೆಳಗುತ್ತಿ, ಹೊಸಕೊಪ್ಪ ಹಾಗೂ ತೀರ್ಥರಾಮೇಶ್ವರ, ದಕ್ಷಿಣಕ್ಕೆ ಮುಗಳಳ್ಳಿ (ರಾಮೇಶ್ವರ), ಯರಗನಾಳು ಗ್ರಾಮಗಳು ಸುತ್ತುವರಿದಿವೆ. ಈ ಊರಿನಲ್ಲಿ ಸಾವಿರಕ್ಕೂ ಹೆಚ್ಚು ಮನೆಗಳಿವೆ. ಆರು ಸಾವಿರಕ್ಕೂ ಹೆಚ್ಚು ಜನಸಂಖ್ಯೆಯಿದೆ. ಈ ಊರಿನ ಪ್ರಮುಖ ರಸ್ತೆ ಒಂದೂವರೆ ಕಿ.ಮೀ.ಗಿಂತಲೂ ಹೆಚ್ಚಿನ ಉದ್ದವಿದೆ. ಪ್ರಮುಖ ರಸ್ತೆಯ ಇಕ್ಕೆಲಗಳಲ್ಲಿ ಹಳ್ಳಿಯ ಬದುಕಿನ ಸರ್ವನಾಡಿಯೇ ಎದ್ದುಕಾಣುತ್ತದೆ. ಈ ಊರಿನ ಪ್ರಮುಖ ಕಸುಬು ಖುಷ್ಕಿ ಬೇಸಾಯವಾಗಿದೆ. ಕೆಂಪು, ಕಪ್ಪು ಭೂಮಿಯನ್ನೇ ಹೆಚ್ಚು ಹೊಂದಿರುವ ಇಲ್ಲಿ ರಾಗಿ, ಜೋಳ, ಗೋಧಿ, ಹತ್ತಿ, ಮೆಣಸಿನಕಾಯಿ, ಈರುಳ್ಳಿ, ಮೆಕ್ಕೆಜೋಳ ಮುಂತಾದ ಬೆಳೆಗಳನ್ನು ಸಾಕಷ್ಟು ಬೆಳೆಯುತ್ತಾರೆ. ಕೃಷಿ ಬದುಕನ್ನೇ ಅವಲಂಬಿಸಿರುವ ಇಲ್ಲಿನ ಜನರು ವ್ಯಾಪಾರ ವಹಿವಾಟುಗಳಿಗೆ ಬೆಳಗುತ್ತಿ, ನ್ಯಾಮತಿ, ಹೊನ್ನಾಳಿ, ಶಿಕಾರಿಪುರ ಸಂತೆಗಳಿಗೆ ಹೋಗಿ ಬರುತ್ತಾರೆ. ಈಗಂತೂ ಶಿಕ್ಷಣ, ಆರೋಗ್ಯ, ಸಾರಿಗೆ ಮುಂತಾದ ಕ್ಷೇತ್ರಗಳಲ್ಲಿ ಅಭಿವೃದ್ಧಿಯಾಗುತ್ತಿದ್ದು ಮೊದಲಿದ್ದಂತಹ ಸಂದಿಗ್ಧ ಪರಿಸ್ಥಿತಿ ಇರುವುದಿಲ್ಲ. ಎಚ್. ದೇವೀರಪ್ಪವರು ಇಂತಹ ಯಾವುದೇ ಸೌಕರ್ಯಗಳಿಲ್ಲದ ಸಂದರ್ಭದಲ್ಲಿ ಹುಟ್ಟಿ ತಮ್ಮ ಬಾಲ್ಯದ ಬದುಕನ್ನು ಕಳೆದವರಾಗಿದ್ದಾರೆ.

ಹಿಂದಿನ ಶಿವಮೊಗ್ಗ ಜಿಲ್ಲೆಗೆ ಒಳಪಟ್ಟಿದ್ದ ಹೊನ್ನಾಳಿ ಮತ್ತು ಚನ್ನಗಿರಿ ತಾಲ್ಲೂಕುಗಳು ಬಯಲುಸೀಮೆ ಪ್ರದೇಶಗಳೆಂದೇ ಕರೆಯಲ್ಪಟ್ಟವೆ. ಸುಮಾರು ೮೦-೯೦ ವರ್ಷಕ್ಕೂ ಮೊದಲು ಹೊನ್ನಾಳಿಯ ಬೆಳಗುತ್ತಿ ಹೋಬಳಿಕೇಂದ್ರ ಅಷ್ಟೇನು ಬಯಲುಪ್ರದೇಶವಾಗಿರಲಿಲ್ಲ. ಪಕ್ಕದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿರುವ ಬೆಟ್ಟಶ್ರೇಣಿ ಈ ಭಾಗವನ್ನು ಮಲೆನಾಡು ಭಾಗವಾಗಿಯೇ ಕಂಗೊಳಿಸುವಂತೆ ಮಾಡಿದ್ದಿದೆ. ಇಲ್ಲಿನ ಕಲುಬಿಗಿರಿರಂಗನ ಬೆಟ್ಟವು ಸೌಳಂಗದ ಸಮೀಪದ ಕೊಡತಾಳಿನಿಂದ ಪ್ರಾರಂಭಗೊಂಡು ತೀರ್ಥರಾಮೇಶ್ವರದ ಮೂಲಕ ಹಾದುಹೋಗುವ ನೋಟ ನಯನಮನೋಹರವಾಗಿದೆ. ಇದನ್ನು ಕಲುಬಿಗಿರಿರಂಗನ ತಾಣ, ಕಲುಬೀರ ರಂಗನಗುಡ್ಡ, ಕಲಬಿಗಿರಿ ರಂಗನಾಥ

ಕ್ಷೇತ್ರ ಮುಂತಾಗಿ ಕರೆಯಲಾಗುತ್ತದೆ. ಈ ಬೆಟ್ಟಸಾಲಿನಲ್ಲಿರುವ ಶ್ರೀ ತೀರ್ಥರಾಮೇಶ್ವರ ಕ್ಷೇತ್ರ ಪವಿತ್ರ ಕ್ಷೇತ್ರಗಳಲ್ಲೊಂದು ಎಂಬ ಹೆಸರು ಗಳಿಸಿದೆ. ಈ ಬೆಟ್ಟವು ಶಿಕಾರಿಪುರ ತಾಲ್ಲೂಕಿನ ಬಳ್ಳೂರು ಗ್ರಾಮದವರೆಗೂ ಹಬ್ಬಿ ಮುಂದುವರಿದಿದೆ. ಈ ಬೆಟ್ಟಸಾಲುಗಳಲ್ಲಿ ತುಪ್ಪದಗಿರಿ, ಶ್ರೀ ಗವಿಸಿದ್ಧೇಶ್ವರ ಬೆಟ್ಟ, ಬೇಟೆಮಲ್ಲಯ್ಯನ ಗಿರಿ, ಕಣಿವೆ ಈರಣ್ಣನ ಬೆಟ್ಟ ಮುಂತಾದ ತಾಣಗಳೂ ಉಂಟು. ಇಂತಹ ಸುಂದರ ಪರ್ವತ ಶ್ರೇಣಿಯನ್ನೂ ಪವಿತ್ರ ಕ್ಷೇತ್ರಗಳನ್ನೂ ಪಶ್ಚಿಮಭಾಗದಲ್ಲಿ ಹೊಂದಿರುವ ಮಲ್ಲಿಗೇನಹಳ್ಳಿ ಗ್ರಾಮ ಅಂದು ಮಲೆನಾಡಿನ ಒಂದು ಭಾಗವಾಗಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

ಮಲೆನಾಡಿನ ಭಾಗದಲ್ಲಿ ಜನಿಸಿರುವ ಕವಿಶ್ರೇಷ್ಠರು, ದಾರ್ಶನಿಕರು, ಸಾಹಿತಿಗಳು, ರಾಜಕಾರಣಿಗಳು, ರೈತ ಹೋರಾಟಗಾರರು, ಸ್ವಾತಂತ್ರ್ಯ ಹೋರಾಟಗಾರರು ಮೊದಲಾದವರು ಈ ನಾಡಿಗೆ ನೀಡಿರುವ ಕೊಡುಗೆ ಅನನ್ಯವಾದುದು. ಇಂತಹರ ಸಾಲಿನಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ದಿಟ್ಟ ಹೆಜ್ಜೆಯನ್ನಿಟ್ಟು, ಯಾರ ಹಂಗೂ ಇಲ್ಲದೆ ತನ್ನದೇ ಮಾರ್ಗದಲ್ಲಿ ಮುನ್ನಡೆದ, ಸಂಶೋಧನಾ ಕಾರ್ಯದಲ್ಲಿ ತನ್ನನ್ನೇ ಸಂಪೂರ್ಣವಾಗಿ ತೊಡಗಿಸಿಕೊಂಡು ಏಕಾಂಗಿಯಾಗಿ ಸಾಹಿತ್ಯ ಕೃಷಿಗೈದವರಲ್ಲಿ ಸನ್ಮಾನ್ಯ ಶ್ರೀ ಎಚ್. ದೇವೀರಪ್ಪನವರೂ ಒಬ್ಬರು. ಹೊನ್ನಾಳಿ ತಾಲ್ಲೂಕಿನ ದಿಗ್ಗಜರುಗಳಾದ ಕನ್ನಡ ನಿಘಂಟುವಿನ ನಿರ್ಮಾತೃವಾದ ನ್ಯಾಮತಿ ಪ್ರಭಣ್ಣ, ಆಸ್ಥಾನ ವಿದ್ವಾಂಸರಾದ ಡಾ. ಬಿ. ದೇವೇಂದ್ರಪ್ಪ, ಹಿರೇಗೋಣಿಗೆರೆಯ ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಾ. ಎಚ್.ಎಂ. ಚನ್ನಯ್ಯ, ಮಹಾತ್ಮಗಾಂಧಿ ಕುರಿತು ಬೃಹತ್ ಕಾವ್ಯವನ್ನು ರಚಿಸಿದ ಹತ್ತೂರಿನ ಪಂಡಿತ ಭರ್ಮಗೌಡ ಅವರು ಈ ಭಾಗದ ಪ್ರಮುಖ ಸಾಹಿತಿಗಳು, ಕವಿಗಳು, ಪಂಡಿತರು, ವಿದ್ವಾಂಸರುಗಳೆಂದು ಹೆಸರು ಪಡೆದಿದ್ದಾರೆ. ಇಂತಹರ ಜೊತೆಗೆ ಮಲ್ಲಿಗೇನಹಳ್ಳಿಯ ಎಚ್. ದೇವೀರಪ್ಪನವರಂಥ ಕೊಡುಗೆ ಈ ಭಾಗದ ಸಾಹಿತ್ಯದ ಹೆಮ್ಮೆಯ ಕಾಣಿಕೆಯಾಗಿದೆ; ಅದರಲ್ಲಿಯೂ ಕನ್ನಡ ಸಾಹಿತ್ಯದ ಸಂಶೋಧನಾ ಕ್ಷೇತ್ರಕ್ಕೆ ನೀಡಿದ ಅಮೂಲ್ಯವಾದ ಕೊಡುಗೆಯಾಗಿದೆ.

### ಜನನ :

ಎಚ್. ದೇವೀರಪ್ಪನವರು ಹುಟ್ಟಿದ್ದು ಮಲ್ಲಿಗೇನಹಳ್ಳಿಯಲ್ಲಿ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ (ಹಿಂದೆ ಶಿವಮೊಗ್ಗ ಜಿಲ್ಲೆ ಆಗಿತ್ತು). ತಂದೆ ಕೃಷಿಕರಾದ ಕರೇಗೌಡರ ತೀರ್ಥಪ್ಪ, ತಾಯಿ ಸಾವಿತ್ರಮ್ಮ. ಹಳ್ಳಿಯ ಬದುಕನ್ನು



ಎಚ್. ದೇವೀರಪ್ಪನವರು ಹುಟ್ಟಿದ ಮನೆ, ಮಲ್ಲಿಗೇನಹಳ್ಳಿ

ಮೈಗೂಡಿಸಿಕೊಂಡ ಸಜ್ಜನ ದಂಪತಿಗಳಿಗೆ ಆರು ಜನ ಮಕ್ಕಳು. ಹಿರಿಯವಳಾದ ಅಕ್ಕ ತೀರ್ಥಮ್ಮ. ಇವರು ಎರಡನೆಯವರು. ತಂಗಿ ಶಿವಗಂಗಮ್ಮ. ತಮ್ಮಂದಿರು ಮೂರುಜನ : ಚನ್ನಬಸಪ್ಪ, ತೀರ್ಥಲಿಂಗಪ್ಪ ಮತ್ತು ಬಸವರಾಜು. ದೇವೀರಪ್ಪನವರು ತಾವು ಹುಟ್ಟಿದ ತಾರೀಖನ್ನು 'ತಾವೇ ಹುಟ್ಟಿಸಿಕೊಂಡು ಬರೆದದ್ದು' ಎಂದು ಹೇಳುತ್ತಾ ೦೬-೦೬-೧೯೧೩ ರಲ್ಲಿ ಜನಿಸಿದ್ದೇನೆ ಎಂದು ದಾಖಲಿಸಿಕೊಂಡಿದ್ದಾರೆ. ಹಳ್ಳಿಯ ಜನರಿಗೆ ಅದರಲ್ಲಿಯೂ ಅವಿದ್ಯಾವಂತರಾದ ತಂದೆ ತಾಯಿಗಳಿಗೆ ಇದು ಮುಖ್ಯವೇನಲ್ಲ.

ಸಾಮಾನ್ಯವಾಗಿ ಹಳ್ಳಿಗರು ತಮ್ಮ ಮಕ್ಕಳು ಹುಟ್ಟಿದ ದಿವಸಗಳ ಬಗ್ಗೆ ಹಬ್ಬ ಹುಣ್ಣಿಮೆ ಅಮಾವಾಸ್ಯೆಗಳ ಲೆಕ್ಕಾಚಾರ ಹಾಕಿ ಹೇಳಿಬಿಡುವುದುಂಟು. ಕೊನೆಗೆ ನೆನಪಾದಂತೆ ಆಗ ಹುಟ್ಟಿದ್ದು, ಇಂಥ ದಿನ ಹುಟ್ಟಿದ್ದು ಎಂದು ಹೇಳಿ ಅಂದಾಜು ಲೆಕ್ಕಾಚಾರ ಮಾಡಿ ವಯಸ್ಸಿನ ದಾಖಲೆಯನ್ನು ನೆನಪಿನಿಂದಲೇ ಹೇಳುತ್ತಿರುತ್ತಾರೆ. ದೇವೀರಪ್ಪನವರು ವಿದ್ಯಾವಂತರಾದ ಕಾರಣ ಹುಟ್ಟಿನ ಸಂದರ್ಭವನ್ನು ನಿಖರವಾಗಿ ಹೇಳಿದ್ದಾರೆ. ಅವರ ತಂದೆ ತಮ್ಮ ಜಾತಕವನ್ನು ಬರೆಸಿಲ್ಲದ ಕಾರಣ, ಅವರಿಗೆ ಬರೆಸಬೇಕೆಂಬುದು ತಿಳಿಯದಿದ್ದರಿಂದಲೊ ಏನೊ ಕೊನೆಗೆ ಹುಟ್ಟಿದ ತಾರೀಖನ್ನು ನಾನೇ ಹುಟ್ಟಿಸಿದ್ದು ಎಂದು ಹೇಳಿ ಅಂತಿಮ ಗೆರೆ ಎಳೆದಿದ್ದಾರೆ. ಒಟ್ಟಿನಲ್ಲಿ ದೇವೀರಪ್ಪನವರು ಮಲ್ಲಿಗೇನಹಳ್ಳಿಯ ಮಲ್ಲಿಗೆಯಂತೆ ಹುಟ್ಟಿ ಚಿಗುರೊಡೆದ ಸಂದರ್ಭವಂತೂ ಬೆಳುವಲದ ನಾಡಿಗೆ ಎಲ್ಲಿಲ್ಲದ ಸೌಭಾಗ್ಯವೆಂದೇ ಹೇಳಬೇಕು.

ಕೃಷಿಕ ದಂಪತಿಗಳಿಗೆ ಮಗನಾಗಿ ಜನಿಸಿದ ದೇವೀರಪ್ಪನವರು ಆ ಮನೆತನದ ಮೊದಲ ಅಕ್ಷರಸ್ಥರೆನಿಸಿಕೊಂಡದ್ದು ನಿಜಕ್ಕೂ ಕುತೂಹಲಕಾರಿ

ಯಾದುದು. ಅವಿದ್ಯಾವಂತರು, ಮುಗ್ಧರು, ಪ್ರಾಪಂಚಿಕ ವಿಚಾರ ತಿಳಿಯದವರು ಆಗಿದ್ದ ತಂದೆತಾಯಿಗಳಿಗೆ ವ್ಯವಸಾಯವೇ ಆದ್ಯ ಕಸುಬಾಗಿತ್ತು. ತಾವಾಯಿತು ತಮ್ಮ ಹೊಲಮನೆ ಕೆಲಸವಾಯಿತು ಎಂದೇ ಭಾವಿಸಿದ್ದ ಅವರು ಸುಸಂಸ್ಕೃತ ಜೀವನ ನಡೆಸುತ್ತ ಸಂತೃಪ್ತರಾಗಿದ್ದರು. ಮತ್ತೊಬ್ಬರ ಬಗ್ಗೆ ಯಾವುದೇ ಕಿಡಿಕಾರದೆ, ಪರರ ಸಂಕಷ್ಟದಲ್ಲಿ ಭಾಗಿಯಾಗುತ್ತ ಸಹಬಾಳ್ವೆಯ ಜೀವನಕ್ಕೆ ತಮ್ಮ ಬದುಕನ್ನೇ ಅರ್ಪಿಸಿಕೊಂಡಿದ್ದರು. ಅವರ ಮನೆ ಊರಿನ ಯಾವುದೋ ಒಂದು ಮೂಲೆಯಲ್ಲಿ ಇದ್ದಿತಾದರೂ ಯಾವುದೇ ತಂಟೆ ತಕರಾರಿಗೂ ಒಳಗಾಗದೆ ಬದುಕನ್ನು ಸಾಗಿಸುತ್ತಿರುವುದಕ್ಕೆ ಸಾಕ್ಷಿಯಾಗಿತ್ತು. ಊರಿನ ಯಾರೇ ಆಗಲಿ ಈ ಮನೆತನದ ಬಗ್ಗೆ ತುಂಬು ಗೌರವವನ್ನು ಇಟ್ಟುಕೊಂಡಿದ್ದರು. ಆರು ಜನ ಮಕ್ಕಳೊಂದಿಗೆ ಕುಟುಂಬವನ್ನು ನಿಭಾಯಿಸಿಕೊಂಡು ಹೋಗುತ್ತಿದ್ದ ತೀರ್ಥಪ್ಪ-ಸಾವಿತ್ರಮ್ಮ ದಂಪತಿಗಳಿಗೆ ಮಕ್ಕಳು ವಿದ್ಯಾವಂತರಾಗಬೇಕೆಂಬ ಆಕಾಂಕ್ಷೆಯನ್ನು ಎಲ್ಲರಂತೆಯೂ ಇಟ್ಟುಕೊಂಡಿದ್ದುದು ಸಹಜವಾಗಿತ್ತು.

ಹಳ್ಳಿಯಲ್ಲಿ ಎಲ್ಲ ಮಕ್ಕಳನ್ನು ಓದಿಸುವುದು ತುಂಬಾ ಕಷ್ಟಕರ ಕೆಲಸವೇ. ಹಳ್ಳಿಯ ಜನರು ತಮಗೆ ಹೆಚ್ಚು ಮಕ್ಕಳಾಗಲಿ ಎಂದು ಬಯಸುತ್ತಿದ್ದುದು ವಿದ್ಯಾವಂತರಾಗಬೇಕೆಂಬ ಮಹಾದಾಸೆಯಿಂದೇನಲ್ಲ. ತಮ್ಮಂತೆಯೇ ತಮ್ಮ ಬದುಕಿನ ಎಲ್ಲ ಕೆಲಸ ಕಾರ್ಯಗಳಲ್ಲಿ ಮಕ್ಕಳೂ ಪಾಲ್ಗೊಂಡು ನಮ್ಮಂತೆಯೇ ಸುಖವಾಗಿ ನೆಮ್ಮದಿಯಿಂದ ಬಾಳಿ ಬದುಕಿದರೆ ಸಾಕು ಎಂಬ ಅಭಿಪ್ರಾಯವೇ ಜಾಸ್ತಿ ಇರುತ್ತದೆ. ಹಾಗಾಗಿ ಇವರೂ ಹಾಗೇ ಎಂದು ಭಾವಿಸಿದ್ದಿರಬೇಕು. ಆದರೆ ದೇವೀರಪ್ಪನವರು ಇದಕ್ಕೆ ತದ್ವಿರುದ್ಧವಾಗಿದ್ದರು. ಹುಡುಗ ಬಹಳ ಚೂಟಿ. ಒಳ್ಳೆಯ ಗುಣ ಸ್ವಭಾವದವ. ನೋಡಲು ಆಕರ್ಷಕ ಮೈಕಟ್ಟುಳ್ಳವ. ಯಾರೇ ಮಾತನಾಡಿಸಿದರೂ ಬಳಬಳನೆ ಮಾತನ್ನುದುರಿಸುತ್ತಿದ್ದ ಜಾಣ್ಮೆಯುಳ್ಳವ. ಇವೆಲ್ಲವೂ ಕೂಡ ದೇವೀರಪ್ಪನವರನ್ನು ಅಕ್ಷರಸ್ಥರನ್ನಾಗಿಸುವ ಸಂದರ್ಭವೇ ಎದ್ದು ಕಾಣುತ್ತಿತ್ತು. ಇನ್ನು ಹತ್ತಿರದಲ್ಲೇ ಶಾಲೆ ಇರುವಾಗ ಕಳುಹಿಸದೆ ಇರಲಿಕ್ಕೆ ಸಾಧ್ಯವೇ? ಅಕ್ಕ ತೀರ್ಥಮ್ಮ ಶಾಲೆಗೆ ಹೋಗದೆ ಇರುವಾಗ ದೇವೀರಪ್ಪ ಶಾಲೆಯ ಮೆಟ್ಟಿಲು ಹತ್ತಿಯೇ ಬಿಟ್ಟರು. ಆಗ ಹೆಣ್ಣು ಮಕ್ಕಳು ಶಾಲೆಗೆ ಹೋಗಬೇಕಾದ ಅನಿವಾರ್ಯ ಇಲ್ಲವೆಂಬ ಭಾವನೆ ಇದ್ದುದರಿಂದಾಗಿ ಅಕ್ಕ ಮನೆಯಲ್ಲಿಯೇ ಕೆಲಸ ಕಾರ್ಯಗಳನ್ನು ಮಾಡಿಕೊಂಡು ಇರಬೇಕಾಯಿತು.

ದೇವೀರಪ್ಪನವರು 'ನಮ್ಮ ಮನೆತನದಲ್ಲಿ ನಾನೇ ಮೊದಲನೆಯ ಅಕ್ಷರಸ್ಥ' ಎಂದು ಹೇಳಿಕೊಂಡಿದ್ದಾರೆ. ಅಲ್ಲದೆ ಆರುಜನ ಸಹೋದರ ಸಹೋದರಿಯರಲ್ಲಿ

ತಾವು ಮತ್ತು ಬಸವರಾಜು ಇಬ್ಬರೇ ವಿದ್ಯಾವಂತರಾಗಿದ್ದು, ಉಳಿದವರ್‍ಯಾರೂ ಸ್ಕೂಲಿಗೇ ಹೋಗಲಿಲ್ಲ ಎಂದುಕೊಂಡಿದ್ದಾರೆ. ಇದಕ್ಕೆಲ್ಲಾ ಮೂಲ ಕಾರಣ ಮನೆಯಲ್ಲಿದ್ದ ಬಡತನ. ಜೊತೆಗೆ ಹೊಲಮನೆಗಳಲ್ಲಿ ಸರಿಯಾಗಿ ಕೆಲಸ ಮಾಡಿಕೊಂಡಿದ್ದರೆ ಅಷ್ಟೇ ಸಾಕು ಎಂಬ ಮನೋಭಾವ. ಆಗ ಇದ್ದಂತಹ ಇನ್ನೊಂದು ಭಾವನೆ ಎಂದರೆ ಮಕ್ಕಳು ತಮ್ಮ ಕಣ್ಣ ಮುಂದೆಯೇ ಇರಬೇಕು, ದೂರ ಹೋಗಿ ಯಾಕೆ ಓದಬೇಕು, ಅದರಿಂದೇನಾಗುತ್ತದೆಂಬುದು. ಹಳ್ಳಿಯ ಜನರ ಕಲ್ಪನೆಗೆ ಹತ್ತಿರವೆಂಬ ಇಂಥ ಮನೋಭಾವದಿಂದಾಗಿ ಅಂದು ಸಾಕಷ್ಟು ಜನ ಅಕ್ಷರ ಕಲಿಯಲು ಹಿಂದೇಟು ಹಾಕುತ್ತಿದ್ದರೆಂಬುದನ್ನು ಊಹಿಸಬಹುದು. ಆದರೂ ಇಂಥ ಸಂದಿಗ್ಧ ಪರಿಸ್ಥಿತಿ, ಮೂಢನಂಬಿಕೆಗಳಿದ್ದ ಕಾಲದಲ್ಲಿ ದೇವೀರಪ್ಪನಂಥವರು ಅಕ್ಷರ ಕಲಿತು ವಿದ್ಯಾವಂತರಾದದ್ದು ಆ ದಂಪತಿಗಳ ಪುಣ್ಯವೆಂದೇ ಹೇಳಬೇಕು.

**ಪ್ರಾಥಮಿಕ ವಿದ್ಯಾಭ್ಯಾಸ :**

ದೇವೀರಪ್ಪನವರ ಪ್ರಾಥಮಿಕ ವಿದ್ಯಾಭ್ಯಾಸ ನಡೆದದ್ದು ಮಲ್ಲಿಗೇನಹಳ್ಳಿಯಲ್ಲಿ. ಇವರ ಮೊದಲ ವಿದ್ಯಾಗುರು ಚನ್ನವೀರಪ್ಪ ಮೇಸ್ಟರು. ದೇವೀರಪ್ಪನಂಥ ಹುಡುಗ ವಿದ್ಯಾರ್ಥಿಯಾಗಿ ದೊರೆತದ್ದಕ್ಕೆ ಅವರ ಗುರುಗಳು ಬಹಳ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರಂತೆ. ಅಲ್ಲದೆ ಹುಡುಗನ ಚಲನವಲನ, ಹಾವ-ಭಾವ, ಬುದ್ಧಿ ಚಾತುರ್ಯವನ್ನು ಕಂಡು ಬಹಳ ಮೆಚ್ಚುಗೆ ವ್ಯಕ್ತಗೊಳಿಸಿದ್ದರಂತೆ. ಇವನೇನಾದರೂ ಬೇಸಾಯಕ್ಕೆ ನಿಂತೇ ಬಿಟ್ಟಿದ್ದಿದ್ದರೆ ಒಬ್ಬ ಅಸಾಧಾರಣ ಪ್ರತಿಭೆಯನ್ನು ಕಳೆದುಕೊಂಡಂತಾಗುತ್ತಿತ್ತು ಎಂಬ ರೀತಿಯಲ್ಲಿ ಸೂಕ್ಷ್ಮವಾಗಿ ಗಮನಿಸುತ್ತಿದ್ದರಂತೆ. ಚಿಕ್ಕ ಹುಡುಗನಾಗಿ ಆಟವಾಡುತ್ತಿದ್ದ ವೇಳೆಯಲ್ಲಿ ಎಡ ಮೊಳಕೈ ಮೂಳೆ ಮುರಿದುಕೊಂಡದ್ದೇ ದೇವೀರಪ್ಪನವರ ಬದುಕಿನಲ್ಲಿ ಹೊಸ ತಿರುವನ್ನುಂಟು ಮಾಡಿತಂತೆ. ಇಲ್ಲದೇ ಹೋಗಿದ್ದಲ್ಲಿ ಗಂಡು ಮಕ್ಕಳಲ್ಲಿ ಹಿರಿಯವನಾದ ತಾನು ಅಪ್ಪನ ಜೊತೆಗೆ ನೇಗಿಲು ಹಿಡಿದು ವ್ಯವಸಾಯ ಮಾಡಲು ತೊಡಗಿಸಿಕೊಳ್ಳಬೇಕಾಗುತ್ತಿತ್ತು. ವ್ಯವಸಾಯ ಮಾಡಲು ಗಟ್ಟಿಯಾದ ಮೈಕಟ್ಟು, ಶಕ್ತಿಬೇಕು ತಾನೆ ? ಆಗಿನ ಸಂದರ್ಭಕ್ಕೆ ದೇವೀರಪ್ಪ ಬಹಳ ಕಾಲ ಮನೆಯಲ್ಲೇ ಇರಬೇಕಾದ ಕಾರಣ ಶಾಲೆಗೆ ಹೋಗುವ ಸುಸಂದರ್ಭ ತಾನಾಗಿಯೇ ಒದಗಿ ಬಂದಿತು. ಹಾಗಾಗಿ ವಿದ್ಯವಂತನಾಗಬೇಕೆಂಬ ಬೃಹತ್ತಾಸೆ ದೇವೀರಪ್ಪನವರಲ್ಲಿ ಚಿಗುರೊಡೆಯಿತು. ಗುರುಗಳಾದ ಚನ್ನವೀರಪ್ಪನವರು ದೇವೀರಪ್ಪನವರ ಮನೆಗೆ ಬಂದು ತಂದೆಯ

ಪತ್ತಿರ 'ನಿನ್ನ ಮಗ ತುಂಬಾ ಬುದ್ಧಿವಂತ, ಸಾಲಿಬಿಡಿಸಬೇಡ' ಎಂದು ಹೇಳಿದ್ದೇ ತೀರ್ಥಪ್ಪನವರ ಮುಖದಲ್ಲಿ ಎಲ್ಲಿಲ್ಲದ ಮಂದಹಾಸ ಮೂಡತೊಡಗಿತು. ಮಗನನ್ನು ವಿದ್ಯಾವಂತನನ್ನಾಗಿ ಮಾಡಬೇಕೆಂಬ ಆಕಾಂಕ್ಷೆಯನ್ನಿಟ್ಟುಕೊಂಡು ಆ ಕಡೆಗೆ ಹೆಚ್ಚಿನ ಪ್ರೀತಿ–ಮಮತೆಗಳನ್ನು ಧಾರೆಯೆರೆಯತೊಡಗಿದರು.

ತಮಗಿಂತ ನಾಲ್ಕು ವರ್ಷ ದೊಡ್ಡವರಾಗಿದ್ದ ಹೊಸಕೊಪ್ಪದ ಎಚ್.ಎಸ್. ರುದ್ರಪ್ಪನವರ ಬಗ್ಗೆ ಹೀಗೆ ಹೇಳಿಕೊಳ್ಳುತ್ತಾರೆ : 'ನಾನು ಅದೇ ಶಾಲೆಯಲ್ಲಿ ಒಂದನೆಯ ತರಗತಿಯಲ್ಲಿದ್ದಾಗ ಎಚ್.ಎಸ್. ರುದ್ರಪ್ಪನವರು (ಮಾಜಿ ಸಚಿವರು) ಐದನೆಯ ತರಗತಿಯಲ್ಲಿದ್ದರು. ಅವರು ನನ್ನ ಸ್ಕೂಲ್ ಮೇಟ್. ಇದು ೧೯೨೨ನೆಯ ಇಸವಿಯ ಸಂದರ್ಭ. ಮಲ್ಲಿಗೇನಹಳ್ಳಿ ಬೆಳಗುತ್ತಿ ಮಧ್ಯೆ ಇರುವ ಶಾಲೆಗೆ ರುದ್ರಪ್ಪನವರು ಹೊಸಕೊಪ್ಪದಿಂದ ಬರುತ್ತಿದ್ದರು. ಈ ಶಾಲೆಗೆ ಬೆಳಗುತ್ತಿ ಶಾಲೆಯೆಂದೇ ಕರೆಯಲಾಗುತ್ತಿತ್ತು. ೧೯೨೪–೨೫ರಲ್ಲಿ ಮಲ್ಲಿಗೇನಹಳ್ಳಿಗೆ ಇನ್‌ಕಂಪ್ಲೀಟ್ ಮಿಡಲ್‌ಸ್ಕೂಲ್ ಬರುವವರೆಗೂ ದೇವೀರಪ್ಪನವರ ವಿದ್ಯಾಭ್ಯಾಸ ಬೆಳಗುತ್ತಿ ಶಾಲೆಯಲ್ಲೇ ನಡೆದಿತ್ತು. '೧೯೨೫ರಲ್ಲಿಯೇ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿತ್ತು. ಪರೀಕ್ಷೆ ಕಟ್ಟಲು ಹಣ ಕೇಳಿದರೆ ನಮ್ಮ ತಾಯಿ ಹೊಡೆಯುತ್ತಿದ್ದರು. ಉಪಾಧ್ಯಾಯರು ಪರೀಕ್ಷೆ ಶುಲ್ಕ ಕೇಳಿದರು. ನಾನು ಮುಂದಿನ ವರ್ಷ ಪರೀಕ್ಷೆ ಕಟ್ಟುತ್ತೇನೆ ಎಂದುಬಿಟ್ಟೆ' ಎನ್ನುವಾಗ ಮನೆಯಲ್ಲಿದ್ದ ಬಡತನದ ಪರಿಸ್ಥಿತಿ ಒಂದು ವರ್ಷ ಪರೀಕ್ಷಾ ಶುಲ್ಕವನ್ನು ಕಟ್ಟಲಾಗದೆ ಹಿಂದೇಟು ಹಾಕುವಂತಹ ಪರಿಸ್ಥಿತಿಯನ್ನು ತಂದೊಡ್ಡಿತು ಎಂಬುದನ್ನು ಕೊನೆಯಗಾಲದವರೆಗೂ ನೆನಪಿಸಿಕೊಂಡು ಹೇಳಿದ್ದರು. ಆದರೂ ಆ ಪರೀಕ್ಷೆಯನ್ನು ೧೯೨೪ರಲ್ಲಿ ಕಟ್ಟಿ ಪಾಸು ಮಾಡಿಕೊಂಡರಂತೆ. '೧೯೨೪ರಲ್ಲಿ ಪರೀಕ್ಷೆಗೆ ಕುಳಿತು ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣನಾದೆ. ನನ್ನ ರಿ.ನಂ. ೯೮೨೭. ಈಗಲೂ ನೆನಪಿದೆ. ಆಗ ನನಗೆ ಹನ್ನೊಂದು ವರ್ಷವೋ ಹನ್ನೆರಡು ವರ್ಷವೋ ಹದಿಮೂರು ವರ್ಷವೋ ತಿಳಿಯದು' ಎಂದುಕೊಂಡಿದ್ದಾರೆ.

**ಪ್ರತಿಭೆಗೆ ಪುರಸ್ಕಾರ :**

ದೇವೀರಪ್ಪನವರ ಬುದ್ಧಿವಂತಿಕೆಗೆ ಸಾಕ್ಷಿಯಾದ ಒಂದು ಘಟನೆ ಹೀಗಿದೆ: ಕನ್ನಡ ಲೋಯರ್ ಸೆಕೆಂಡರಿ ಓದುತ್ತಿದ್ದ ಸಂದರ್ಭದಲ್ಲಿ ಆಗ ಲಾ ಓದುತ್ತಿದ್ದ

ಹೆಚ್.ಲಿಂಗಪ್ಪನವರು ಅಂಕಗಣಿತದಲ್ಲಿ ಪರೀಕ್ಷಾ ಸ್ಪರ್ಧೆ ನಡೆಸಿದಾಗ ಅದರಲ್ಲಿ ದೇವೀರಪ್ಪನವರೇ ಮೊದಲನೆಯವರಾಗಿದ್ದರು. ಅವರಿಗೆ ದೊರೆತ ಬಹುಮಾನ ಒಂದು ರೂಪಾಯಿ! 'ಹೆಚ್. ಲಿಂಗಪ್ಪನವರು ಅಂಕಗಣಿತದಲ್ಲಿ ಪರೀಕ್ಷಾ ಸ್ಪರ್ಧೆ ನಡೆಸಿದರು. ನಾನೇ ಮೊದಲನೆಯವ! ಬಹುಮಾನ ಒಂದು ರೂಪಾಯಿ ಅಷ್ಟೆ. ರೂಪಾಯಿಯ ಝಣ ಝಣ ಇನ್ನೂ ನನ್ನ ಕಿವಿಯಲ್ಲಿ ಅಣುರಣಿಸುತ್ತದೆ' ಎಂದು ಹೇಳುವ ಮಾತನ್ನು ಗಮನಿಸುವಾಗ ದೇವೀರಪ್ಪನವರು ಪ್ರಾರಂಭದಲ್ಲೇ ಮಾಡಿದ ಸಾಧನೆ ತುಂಬಾ ದೊಡ್ಡದಾಗಿತ್ತು ಎಂಬುದು ಕಂಡುಬರುತ್ತದೆ.

ಇಂಥ ಪ್ರತಿಭಾನ್ವಿತ ಹುಡುಗನಿಗೆ ಓದಬೇಕೆಂಬ ಹಂಬಲ ದಿನನಿತ್ಯವೂ ಕಾಡುತ್ತಿತ್ತು. ೧೯೨೪-೨೫ರಲ್ಲಿ ಮಲ್ಲಿಗೇನಹಳ್ಳಿಗೆ ಇನ್‌ಕಂಪ್ಲೀಟ್ ಮಿಡಲ್‌ಸ್ಕೂಲ್ ಮಂಜೂರಾಯಿತು. ಇಲ್ಲಿಗೆ ಮುಖ್ಯೋಪಾಧ್ಯಾಯರಾಗಿ ಬಂದವರು ಪಕ್ಕದ ಊರಾದ ಮುಗಳಹಳ್ಳಿಯ ಮಲ್ಲಪ್ಪನವರು. ದೇವೀರಪ್ಪನವರ ಪುಣ್ಯವೋ ಏನೋ ಗುರುಗಳ ಹತ್ತಿರ ಇಂಗ್ಲೀಷ್ ಕಲಿಯುವ ಸುದೈವ ಒದಗಿಬಂದಿತು. ದೇವೀರಪ್ಪನವರು ಮೊದಲು ಎಬಿಸಿಡಿಯನ್ನು ಮಲ್ಲಪ್ಪನವರ ಬಳಿ ಕಲಿತರು. ಆ ಗುರುಗಳೂ ಸಹ ದೇವೀರಪ್ಪನವರಲ್ಲಿದ್ದ ಓದುವ ತವಕವನ್ನು ಗಮನಿಸಿ ಉತ್ತಮವಾಗಿ ಕಲಿಸಿಕೊಟ್ಟರು.

ಮುಂದೇನು? ಮುಂದಿನ ವ್ಯಾಸಂಗವನ್ನು ಎಲ್ಲಿ ಮಾಡುವುದು? ಹೇಗೆ ಮಾಡುವುದು? ಚಿಂತೆ ಕಾಡತೊಡಗಿತು. ಕನ್ನಡ ಲೋಯರ್ ಪರೀಕ್ಷೆ ಪಾಸಾದವರಿಗೆ ಎರಡೇ ವರ್ಷದಲ್ಲಿ ಇಂಗ್ಲೀಷ್ ಹೇಳಿಕೊಟ್ಟು ಇಂಗ್ಲೀಷ್ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕುಳಿತುಕೊಳ್ಳುವ ಏರ್ಪಾಟು ಇತ್ತು. ಕೈಯಲ್ಲಿ ಬೇರೆ ಕಾಸು ಇಲ್ಲ. ಅದೂ ಶಿವಮೊಗ್ಗಕ್ಕೆ ಹೋಗಿ ಬರಬೇಕಿತ್ತು. ಅಲ್ಲಿಗೂ ಕಾಸಿಲ್ಲದೆ ಹೋಗುವುದಾದರೂ ಹೇಗೆ? ಅದಕ್ಕಾಗಿ ಹೀಗೆ ಹೇಳಿಕೊಳ್ಳುತ್ತಾರೆ: "ಶಿವಮೊಗ್ಗೆಗೆ ಹೋಗುವ, 'ದಯವುಳ್ಳ' ವಿದ್ಯಾರ್ಥಿಗಳೇರುವ ಸಾರಿಗೆ ಬಂಡಿಯನ್ನೇರಿ ಹೋದೆ. ವಾರದ ಮನೆ ಮಾಡಿಕೊಡುತ್ತೇವೆಂದು ಯಾರೋ ಹೇಳಿದ್ದರು. ಅವರನ್ನು ನಂಬಿಕೊಂಡು ಹೋದೆ. ಆಗ ಬಸ್ಸುಗಳ ಸೌಕರ್ಯ ಇರಲಿಲ್ಲ. ನಡೆದುಕೊಂಡು ಹೋಗಬೇಕು, ಇಲ್ಲವೆ ಗಾಡಿ ಹತ್ತಿಕೊಂಡು ಹೋಗಬೇಕು. ಶಿವಮೊಗ್ಗಕ್ಕೆ ಹೋಗಬೇಕಾದರೆ ೩೫ ಕಿ.ಮೀ. ಆಗುತ್ತದೆ. ಒಟ್ಟನಲ್ಲಿ ಮಿತ್ರರ ಸಹಕಾರದಿಂದ ಶಿವಮೊಗ್ಗವನ್ನು ತಲುಪಿದರು.

ಶಿವಮೊಗ್ಗಕ್ಕೆ ಹೋದಮೇಲೆ ಊಟ, ವಸತಿಗೆ ಏನು ಮಾಡಬೇಕು? ವಾರದ ಮನೆ ಮಾಡಿಕೊಡುತ್ತೇವೆಂದು ಮಿತ್ರರು ಹೇಳಿದ್ದರೂ ಅದೂ ಸಾಧ್ಯವಾಗಲಿಲ್ಲ. ಕೊನೆಗೆ ಎನ್‌ಡಿವಿ ಹಾಸ್ಟೆಲ್‌ನಲ್ಲಿ ಸೀಟು ದೊರಕಿತು.

ಆಗ ದೇವೀರಪ್ಪನವರಿಗಾದ ಸಂತೋಷ ಹೇಳತೀರದು. ಮಿತ್ರರ ಪ್ರೋತ್ಸಾಹದಿಂದಾಗಿ ಅಲ್ಲಿ ಉಳಿದುಕೊಳ್ಳುವ ಏರ್ಪಾಟು ಆಗಿದ್ದರಿಂದ ಸ್ವಲ್ಪ ನೆಮ್ಮದಿಯ ನಿಟ್ಟುಸಿರುಬಿಡುವಂತಾಯಿತು. ಈ ಸಂತೋಷ, ನಿಟ್ಟುಸಿರು ಕ್ಷಣಕಾಲವಷ್ಟೇ ಮನಸ್ಸಿಗೆ ಮುದ ನೀಡಿತು. ದೇವೀರಪ್ಪನವರ ದುರ್ದೈವವೊ ಎಂಬಂತೆ ಆ ವರ್ಷ ನಡೆಯಬೇಕಿದ್ದ ಸ್ಪೆಷಲ್ ಇಂಗ್ಲೀಷ್ ತರಗತಿಗಳು ರದ್ದಾಗಿದ್ದವು. ಇದರಿಂದಾಗಿ ದೇವೀರಪ್ಪನವರ ಮುಖದಲ್ಲಿ ದುಃಖ ಮಡುಗಟ್ಟಿತು. ಬಂದದಾರಿಗೆ ಸುಂಕವಿಲ್ಲ ಎನ್ನುವಂತೆ ಮರಳಿ ಮಲ್ಲಿಗೇನಹಳ್ಳಿಗೆ ಬೇರೆ ದಾರಿಯೇ ಇಲ್ಲದೆ ಹಿಂತಿರುಗಿ ಬಂದರು. ದೇವೀರಪ್ಪನವರ ಆಗಿನ ಸ್ಥಿತಿ ಹೇಗಿತ್ತೆಂದರೆ ಅವರೇ ಹೇಳಿಕೊಳ್ಳುವಂತೆ 'ಓದು ಒಕ್ಕಾಲು ಹೊಲಗದ್ದೆಗಳಲ್ಲಿ ತಿರುಗುವುದು ಮುಕ್ಕಾಲು' ಎಂಬಂತಾಗಿತ್ತು.

**ಅಪ್ಪರ್ ಸೆಕೆಂಡರಿ ವ್ಯಾಸಂಗ :**

ಮುಂದಿನ ವರ್ಷ ಅಂದರೆ ೧೯೨೫-೨೬. ಈ ಸಂದರ್ಭ ದೇವೀರಪ್ಪನವರಲ್ಲಿ ಓದುವ ಆಸೆಯನ್ನು ಮತ್ತಷ್ಟು ಚಿಗುರಿಸಿಬಿಟ್ಟಿತು. ಅವರ ಸಹಪಾಠಿಯೊಬ್ಬರು ಅದಾಗಲೇ ೧೯೨೪ರಲ್ಲಿ ಶಿವಮೊಗ್ಗಕ್ಕೆ ಅಪ್ಪರ್ ಸೆಕೆಂಡರಿ ಓದಲು ಹೋಗಿದ್ದವರು ಹಿಂತಿರುಗಿ ಬಂದಿದ್ದರು. ೧೯೨೫ರ ಬೇಸಿಗೆ ರಜಾದಿನಕ್ಕೆ ಕಾಲಕಳೆಯಲು ಊರಿಗೆ ಬಂದಿದ್ದರು. ಬಂದವರೇ ದೇವೀರಪ್ಪನವರನ್ನು ಕಂಡು ಕ್ಷೇಮ ಸಮಾಚಾರಗಳನ್ನು ವಿಚಾರಿಸಿಕೊಂಡರು. ಅವರಲ್ಲಿದ್ದ ಆಸೆ ಆಕಾಂಕ್ಷೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಅವರಿಗೆ ಒಂದು ಉಪಾಯ ಹೇಳಿಕೊಟ್ಟರು. ತಾವೇ ಮಾರ್ಗದರ್ಶಕರಾಗಿದ್ದಂತೆ ಧೈರ್ಯ ತುಂಬಿ ಹುರಿದುಂಬಿಸಿದರು. ದೇವೀರಪ್ಪನವರಿಗೆ "ಅಪ್ಪರ್ ಸೆಕೆಂಡರಿ (ಜೂನಿಯರ್)ಗೆ ಸೇರಿದ ಪ್ರೈವೇಟ್ ವಿದ್ಯಾರ್ಥಿಗಳಿಗೆ ತಿಂಗಳಿಗೆ ಹನ್ನೆರಡು ರೂಪಾಯಿ ವೇತನ ಕೊಡುತ್ತಾರೆ. ನೀನೂ ಬಾ" ಅಂದು ಕರೆದರು. ಆಮೇಲೆ "ಮೂರು ತಿಂಗಳು ಹೇಗೋ ಕಾಲ ಹಾಕಿದರೆ ಸಾಕು. ಅನಂತರ ವಿದ್ಯಾರ್ಥಿ ವೇತನ ಸ್ಯಾಂಕ್ಷನ್ ಆಗಿ ಬರುತ್ತದೆ" ಎಂದು ಹೇಳಿ ಒಪ್ಪಿಸಿದರು. ದೇವೀರಪ್ಪನವರ ಮನಸ್ಸು ತಡೆಯಲಿಲ್ಲ. ಸಹಪಾಠಿಯ ಮಾತು ಅವರಿಗೆ ಮಾರ್ಗದರ್ಶನದಂತೆ ಮಾತ್ರ ಕಾಣಿಸಲಿಲ್ಲ. ಮುಳುಗುತ್ತಿರುವವನಿಗೆ ಹುಲ್ಲುಕಡ್ಡಿ ಆಸರೆಯಾದಂತೆ ಕಂಡುಬಂದಿತು. ದಾರಿಯಿದ್ದರೂ ಹಣದ ಅಭಾವ ಅಪಾರವಾಗಿ ಕಾಡುತ್ತಿತ್ತು. ಹೇಗೊ ಅಲ್ಪಸ್ವಲ್ಪ ಹಣ ಹೊಂದಿಸಿಕೊಂಡು ಶಿವಮೊಗ್ಗೆಗೆ ಬಂದರು. ಸ್ಕೂಲಿಗೆ ಸೇರಿಕೊಂಡು ವ್ಯಾಸಂಗ ಮುಂದುವರಿಸಿದರು. ಮೂರು ತಿಂಗಳಾಯಿತು. ಆರು ತಿಂಗಳಾಯಿತು. ವೇತನ ಯಾರಿಗೂ

ಬರಲಿಲ್ಲ. ಇದರಿಂದಾಗಿ ಅಪ್ಪರ್ ಸೆಕೆಂಡರಿ (ಜೂನಿಯರ್) ವಿದ್ಯಾರ್ಥಿಗಳೆಲ್ಲರಿಗೂ ನಿರಾಸೆಯ ಕಾರ್ಮೋಡ ಕವಿಯಿತು. ಉತ್ಸಾಹದ ಚಿಲುಮೆ ಬತ್ತಿ ಬರಿದಾಗಿ ಹೋಯಿತು. ಕೈಯಲ್ಲಿ ಕಾಸಿಲ್ಲದೆ ಪರದಾಡಬೇಕಾಯಿತು. ಈ ಸಂದರ್ಭದಲ್ಲಿ ದೇವೀರಪ್ಪನವರಿಗೆ ಮತ್ತೊಂದು ಬಾಧೆ ಕಾಡತೊಡಗಿತ್ತು. ಇವರು ಶಿವಮೊಗ್ಗದಲ್ಲಿ ಸೇರಿಕೊಂಡಿದ್ದ ನಾರ್ಮಲ್ ಸ್ಕೂಲ್ ಕಟ್ಟಡದಲ್ಲಿ ಸೊಳ್ಳೆಗಳ ಸಾಮ್ರಾಜ್ಯವೂ ಸಾಮ್ರಾಜ್ಯ. ಇದಕ್ಕೆ ರಾಜಾರಾಯರ ಬಂಗಲೆ ಎಂದು ಜನ ಕರೆಯುತ್ತಿದ್ದರಂತೆ. ೧೯೨೫–೨೬ನೆಯ ಆ ವರ್ಷದಲ್ಲಿ ಶಿವಮೊಗ್ಗದ ಮಲೆನಾಡಿನಲ್ಲಿ ಮಲೇರಿಯಾ ಎಲ್ಲ ಕಡೆ ಹಬ್ಬಿಹೋಗಿತ್ತು. 'ಮಲೇರಿಯಾ ಮಾರಿಯೇ ಮಗ್ಗುಲಿನ ನಾರಿ !' ಎಂಬಂತೆ ಕಾಣತೊಡಗಿತ್ತು. ಹಾಗಾಗಿ ಒಂದೆರಡು ಸಲ ಮಲೇರಿಯಾಕ್ಕೆ ಸಿಕ್ಕಿ ನರಳತೊಡಗಿದರು. ಈ ಸಂದರ್ಭದಲ್ಲಿ ಒಂದೆರಡು ಸಲ ಊರಿಗೂ ಹೋಗಿಬಂದರು. ಆದರೂ ಮಲೇರಿಯಾದ ಕಾಟ ಅವರ ಆರೋಗ್ಯವನ್ನು ಸುಸ್ಥಿತಿಯಲ್ಲಿಡದೆ ವಿಪರೀತ ತೊಂದರೆಗೀಡು ಮಾಡಿತು. ವಿದ್ಯಾರ್ಥಿ ವೇತನವಿಲ್ಲದೆ ಒಂದು ಕಡೆ ನರಳುತ್ತಿದ್ದರೆ, ಮತ್ತೊಂದೆಡೆ ಮಲೇರಿಯಾ ಇಂತಹ ಕಿರುಕುಳ ನೀಡತೊಡಗಿತ್ತು. ಇದರ ಮಧ್ಯೆಯೂ ದೇವಿರಪ್ಪನವರು ಅಪ್ಪರ್ ಸೆಕೆಂಡರಿ ಜ್ಯೂನಿಯರ್ ಪರೀಕ್ಷೆಯನ್ನು ಬರೆದೇ ಬಿಟ್ಟರು. ಅದರಲ್ಲಿ ಪಾಸಾಗಿಯೂ ಬಿಟ್ಟರು ! ಆಗ ದೇವೀರಪ್ಪನವರಿಗೆ ಸಮಾಧಾನವೂ ಆಯಿತು.

೧೯೨೬–೨೭ನೇ ವರ್ಷ. ಮತ್ತೆ ಮುಂದಿನ ವ್ಯಾಸಂಗ ಮುಂದುವರಿಸಬೇಕು ತಾನೆ ? ಹೇಗಾದರೂ ಮಾಡಿ ಓದಬೇಕೆಂಬ ಹಂಬಲವಿದ್ದರೂ ಹಣದ ಮುಗ್ಗಟ್ಟು ಕಣ್ಣೆದುರು ಸುಳಿದಾಡುತ್ತಿತ್ತು. ಹಿಂದೇಟು ಹಾಕಲು ಮನಸ್ಸಾಗಲಿಲ್ಲ. ನಾರ್ಮಲ್ ಸ್ಕೂಲ್‌ಗೆ ಹೋಗಿ ಅಪ್ಪರ್ ಸೆಕೆಂಡರಿ (ಸೀನಿಯರ್)ಗೆ ಸೇರಿಕೊಂಡರು. ಹಾಸ್ಟೆಲ್‌ಗೆ ಅಡ್ವಾನ್ಸ್ ಹಣಕೊಡಲಿಕ್ಕಾಗದೆ ಹೇಗೊ ಸೇರಿಕೊಂಡರು. ಅಲ್ಲಿ ಎರಡು ತಿಂಗಳ ಊಟದ ಹಣವನ್ನೂ ಕೊಡಲಾಗಲಿಲ್ಲ. ಅದೆಲ್ಲಿ ಇವರನ್ನೇ ಹುಡುಕಿಕೊಂಡು ಮಲೇರಿಯಾ ಕಾಡುತ್ತಿತ್ತೋ ಏನೊ. ಆಗಲೂ ಬಿಡದೆ ಕಾಡತೊಡಗಿತು. ಮಲೇರಿಯಾ ಜ್ವರದಿಂದಾಗಿ ಊರಿಗೆ ವಾಪಸ್ಸು ಬಂದೇ ಬಿಟ್ಟರು. ಪುನಃ ಅಪ್ಪರ್ ಸೆಕೆಂಡರಿ (ಸೀನಿಯರ್) ಗೆ ಓದಲು ಹೋಗಲಾಗಲಿಲ್ಲ.

ಆ ಕಾಲದಲ್ಲಿ ಅಪ್ಪರ್ ಸೆಕೆಂಡರಿ ಮಾಡಿಕೊಂಡಿದ್ದರೆ ತಕ್ಷಣವೇ ಪ್ರಾಥಮಿಕ ಶಾಲಾ ಶಿಕ್ಷಕರ ಕೆಲಸ ಸುಲಭವಾಗಿ ದೊರಕುತ್ತಿತ್ತು. ಆದರೆ ದೇವೀರಪ್ಪನವರ ವಿಷಯದಲ್ಲಿ ಹೀಗಾಗಲಿಲ್ಲ. ಒಂದು ವೇಳೆ ಅಪ್ಪರ್

ಸೆಕೆಂಡರಿಯಲ್ಲಿ ತೇರ್ಗಡೆಯಾಗಿದ್ದಿದ್ದರೆ ದೇವೀರಪ್ಪನವರು ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಕೆಲಸಕ್ಕೆ ಸೇರಿ ಚಿಕ್ಕಮಕ್ಕಳಿಗೆ ಪಾಠ ಹೇಳಿಕೊಂಡು ಅದರಲ್ಲಿಯೇ ನಿವೃತ್ತರಾಗುತ್ತಿದ್ದರೊ ಏನೊ ! ಅದಕ್ಕೇ ಏನೊ ಅವರಿಗೆ ಮಲೇರಿಯ ಅವರನ್ನು ಕಾಡಿದ್ದು ಒಂದು ರೀತಿಯಲ್ಲಿ ವರದಾನವಾದಂತೆ ಕಂಡುಬಂದಿತು. ಅವರೇ ಹೇಳಿಕೊಳ್ಳುವಂತೆ "ಅಪ್ಪರ್ ಸೆಕೆಂಡರಿ ಮುಗಿಸಿದ್ದರೆ ನಾನೂ ನನ್ನ ಇತರ ಸಹಪಾಠಿಗಳಂತೆ ಯಾವುದೋ ಒಂದು ಪ್ರಾಥಮಿಕ ಶಾಲೆಯ ಮಾಸ್ಟರ್ ಆಗುತ್ತಿದ್ದೆ. ಐವತ್ತೈದನೆಯ ವಯಸ್ಸಿಗೆ ನಿವೃತ್ತನಾಗುತ್ತಿದ್ದೆ" ಎಂದುಕೊಂಡಿದ್ದಾರೆ. ದೇವೀರಪ್ಪನವರ ಈ ಚಿಂತನೆಯ ಹಿಂದೆ ಮಹತ್ತ್ವವಾದ ಕೆಲಸವೊಂದನ್ನು ಮಾಡಬಹುದಾದ ಹೆಬ್ಬಯಕೆ ಇತ್ತು ಎಂಬುದು ಕಂಡುಬರುತ್ತದೆ. ಹಾಗಾಗಿ ಉಪಾಧ್ಯಾಯ ನಾಗಿ ಕೆಲಸ ಮಾಡಿ ಸುಖವಾಗಿರಬಹುದಿತ್ತು ಎನ್ನುತ್ತಲೇ ಇದನ್ನು ಹೇಗೆ ಹೇಳಲು ಸಾಧ್ಯ? ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುತ್ತಾರೆ. ಸುಖ ಬರೀ ವಿದ್ಯೆಯಲ್ಲಿರುತ್ತದೆಂಪೇ? ತಾವೇ ಉತ್ತರ ಕಂಡುಕೊಳ್ಳುತ್ತಾ ಪದವಿ (ಬಿಎ., ಎಂಎ.)ಯಲ್ಲಿ ಇದು ಇರುತ್ತದೆಯೊ- ಯಾರು ಕಂಡವರು? ಅಥವಾ ನಾವು ಸುಖವಾಗಿದ್ದು ಇಲ್ಲ ಎಂದುಕೊಳ್ಳುತ್ತೇವೆಯೊ? ಬದುಕಿನ ಜಟಿಲತೆಯನ್ನು ಅರ್ಥಮಾಡಿಕೊಳ್ಳಲು ನಿತ್ಯವೂ ಹೀಗೆ ಆಲೋಚಿಸುತ್ತಾ ವ್ಯಾಸಂಗದ ಸುತ್ತಲೇ ಮನಸ್ಸನ್ನು ಹರಿದುಬಿಡುತ್ತಾರೆ. ಸಾಕಷ್ಟು ಹಳಗನ್ನಡ, ಕೃತಿಗಳನ್ನು ಓದಿ-ಓದಿ ಅವುಗಳಲ್ಲೇ ಮಗ್ನರಾಗುತ್ತಾರೆ. ಅವರೇ ಹೇಳಿಕೊಳ್ಳುವಂತೆ ಅಪ್ಪರ್ ಸೆಕೆಂಡರಿ ಓದಿದ್ದರಿಂದ ನನಗೆ ಎರಡು ಪ್ರಯೋಜನಗಳಾದುವು ಎಂದಿದ್ದಾರೆ. ಅವೆಂದರೆ :

೧. ಶಬ್ದಮಣಿದರ್ಪಣ, ಶಾಸನ ಪದ್ಯಮಂಜರಿ, ಅದ್ಭುತ ರಾಮಾಯಣ, ಜೈಮಿನಿಭಾರತಗಳ ಪರಿಚಯವಾಯಿತು. ಕನ್ನಡದಲ್ಲಿ ನನಗೆ ಹೆಚ್ಚು ಅಂಕ ಬರುತ್ತಿದ್ದವು. ಇತರ ವಿಷಯಗಳಲ್ಲಿಯೂ ಅಷ್ಟೆ.

೨. ಆಗ ಅಪ್ಪರ್ ಸೆಕೆಂಡರಿ ಓದಿದವರು ಸಂಸ್ಕೃತವನ್ನೋ ಇಂಗ್ಲಿಷನ್ನೋ ಎರಡನೆಯ ಪಬ್ಲಿಕ್ ಭಾಷೆಯನ್ನಾಗಿ ವ್ಯಾಸಂಗ ಮಾಡಬೇಕಾಗಿತ್ತು. ನಾನು ಅಲ್ಲಿಯೂ ಕೊಂಚ ಮಟ್ಟಿಗೆ ಇಂಗ್ಲೀಷ್ ಕಲಿತೆ.

ದೇವೀರಪ್ಪನವರು ಇಲ್ಲಿ ಕೇವಲ ಅಪ್ಪರ್ ಸೆಕೆಂಡರಿ ಪರೀಕ್ಷೆ ಪಾಸು ಮಾಡಲಿಲ್ಲ. ಮುಂದೆ ಹಳಗನ್ನಡದ ಬೃಹತ್ ಕೃತಿಗಳನ್ನು ಓದಿ ಅದರಲ್ಲೂ ತೇರ್ಗಡೆ ಹೊಂದಿದರು! ಇದರಿಂದಾಗಿ ಅವರಿಗೆ ಅಪಾರವಾದ ಜ್ಞಾನ ತಾನಾಗಿಯೇ ಲಭಿಸಿತು ! ಪ್ರತಿಭಾಶಾಲಿಗಳಾಗಿದ್ದ ದೇವೀರಪ್ಪನವರು ಪ್ರತಿಭಾ

ಸಂಪನ್ನರಾಗತೊಡಗಿದರು !! ಕನ್ನಡದ ವಿಚಾರದಲ್ಲಿ ಹೆಚ್ಚು ತಿಳಿದುಕೊಂಡವರಂತೆ ಭಾಷಾ ಜ್ಞಾನ ಹೊಂದಿದರು !! ಇದಕ್ಕೆಲ್ಲಾ ಮೂಲ ಕಾರಣವಾದ ಅಪ್ಪರ್ ಸೆಕೆಂಡರಿ ಓದಿನ ಬಗ್ಗೆ ಆಗಾಗ ಸ್ಮರಿಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ದೇವೀರಪ್ಪನವರು ಹಲವರಿಗೆ ಹೇಳುತ್ತಲೇ ಇದ್ದರು. ನಾನೂ ಕೂಡ ಅನೇಕಸಲ ಇದನ್ನು ಕೇಳಿ ಅವರ ಬಗ್ಗೆ ತುಂಬಾ ಅಭಿಮಾನದಿಂದ ಹೇಳಿಕೊಂಡದ್ದುಂಟು.

ದೇವೀರಪ್ಪನವರು ಅಪ್ಪರ್ ಸೆಕೆಂಡರಿಯನ್ನು ಆ ವರ್ಷದಲ್ಲಿ ಮಾಡಲಾಗಲಿಲ್ಲವೆಂಬುದಂತೂ ನಿಜ. ಅಲ್ಲದೆ ಅವರಿಗೆ ೧೯೨೭ರವರೆಗೂ ಯಾವ ಪರೀಕ್ಷೆಯನ್ನು ತೆಗೆದುಕೊಳ್ಳುವ ಅವಕಾಶ ಲಭಿಸದೇ ಹೋಗಿದ್ದು ತುಂಬಾ ವಿಷಾದನೀಯ. ೧೯೨೪ರಲ್ಲಿ ಕನ್ನಡ ಲೋಯರ್ ಸೆಕೆಂಡರಿ ಮಾಡಿಕೊಂಡಾದ ಮೇಲೆ ಮಧ್ಯೆ ಮಧ್ಯೆ ಅವಕಾಶ ದೊರಕದ ಕಾರಣ ಹಾಗೇ ಕಾಲ ಕಳೆಯಬೇಕಾಯಿತು. ಆ ಊರಿಗೆ ೧೯೨೭-೨೮ರ ಹೊತ್ತಿಗೆ ಇನ್‌ಕಂಪ್ಲೀಟ್ ಮಿಡಲ್ ಸ್ಕೂಲ್‌ಗೆ ಹೆಡ್ಮಾಸ್ಟರ್ ಆಗಿ ಎಂ.ವಿ.ಕೃಷ್ಣಪ್ಪ ಎಂಬುವವರು ಬಂದರು. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಫೇಲ್ ಆಗಿದ್ದರೂ ಕೂಡ ಇಂಗ್ಲೀಷಿನಲ್ಲಿ ಚನ್ನಾಗಿ ತಿಳಿದುಕೊಂಡಿದ್ದರು. ದೇವೀರಪ್ಪನವರಿಗೆ ಇಂಗ್ಲೀಷ್ ಕಲಿಯುವ ಅವಕಾಶ ಒದಗಿಬಂದಿತು. ಅವರಲ್ಲಿ ಇಂಗ್ಲೀಷ್ ವಿದ್ಯಾಭ್ಯಾಸ ಮುಂದುವರಿಸಿದರು. ೧೯೨೮ರ ಹೊತ್ತಿಗೆ ಇಂಗ್ಲೀಷ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಮುಗಳಹಳ್ಳಿಯ ಮಲ್ಲಪ್ಪನವರು ದೇವೀರಪ್ಪನವರಿಗೆ ಎ.ಬಿ.ಸಿ.ಡಿ ಕಲಿಸಿದ ಗುರುಗಳಾದರೆ ಎಂ.ವಿ. ಕೃಷ್ಣಪ್ಪನವರು ಉತ್ತಮ ಇಂಗ್ಲಿಷ್ ಅಭ್ಯಾಸ ಮಾಡಿಸಿದ ಗುರುಗಳಾದರು.

ಇಂಗ್ಲೀಷ್ ಲೋಯರ್ ಸೆಕೆಂಡರಿ ಪಾಸು ಮಾಡಿದ ನಂತರ ಕಾಡಿದ ಪ್ರಶ್ನೆ ಮುಂದೇನು ? ಎಂಬುದು. ಊರಿನಲ್ಲಿಯೇ ಅಲೆದಾಡುತ್ತ ಕಾಲ ಕಳೆಯುತ್ತಿದ್ದ ಅವರಿಗೆ ಕೆಲವು ದಿನ ತಿಂಗಳಿಗೆ ಹದಿಮೂರು ರೂಪಾಯಿ ಸಂಬಳದ ಕೆಲಸ ದೊರಕಿತು. 'ಟ್ರೇನಿಂಗ್ ಬದಲಿ'ಯಾಗಿ ಕೆಲಸಮಾಡಿದರು. ಇದಾದ ನಂತರ ಮುಂದಿನ ಓದಿನ ಬಗ್ಗೆ ಯೋಚಿಸತೊಡಗಿದರು. ೧೯೨೯-೩೦ರಲ್ಲಿ ಹೈಸ್ಕೂಲ್‌ಗೆ ಸೇರಿಕೊಳ್ಳಲು ದಾವಣಗೆರೆಗೆ ಪಯಣ ಬೆಳೆಸಿದರು. ಅಲ್ಲಿ ಉಚಿತ ವಿದ್ಯಾರ್ಥಿನಿಲಯಕ್ಕೆ ಸೇರಿಕೊಂಡರು. ಎರಡು ವರ್ಷಗಳ ಕಾಲ ವಿರಕ್ತಮಠದಲ್ಲಿದ್ದು, ಕಡೆಯ ವರ್ಷ ಸಾಧು ವೀರಶೈವ ಹಾಸ್ಟೆಲ್‌ನಲ್ಲಿ ಇದ್ದುಕೊಂಡು ವ್ಯಾಸಂಗವನ್ನು ಮುಂದುವರೆಸಿದರು.

**ಫಸ್ಟ್‌ಕ್ಲಾಸ್ ಅಲ್ಲ, ಎಂಟು ಅಂಕ ಕಡಿಮೆ ! :**

ದೇವೀರಪ್ಪನವರೆಂದರೆ ರ್‍ಯಾಂಕ್ ವಿದ್ಯಾರ್ಥಿಯೆಂದೇ ಹೆಸರು ಗಳಿಸಿದ್ದರು. ಇವರೊಂದಿಗೆ ಓದುತ್ತಿದ್ದ ಸಹಪಾಠಿಗಳು ಸ್ಕೌಟ್‌ದಳಕ್ಕೆ ಸೇರಿಕೊಂಡಿದ್ದಾಗ ಇವರನ್ನು ಸೇರಿಕೊಳ್ಳಲು ಒತ್ತಾಯಿಸಿದರು. ಆದರೆ ದೇವೀರಪ್ಪನವರ ಹತ್ತಿರ ಸ್ಕೌಟ್ ಬಟ್ಟೆಗಳನ್ನು ಹೊಲಿಸಿಕೊಳ್ಳುವಷ್ಟು ಹಣ ಇರಲಿಲ್ಲ. ಹಾಗಾಗಿ ಸ್ಕೌಟ್ ದಳವನ್ನು ಸೇರುವುದನ್ನೇ ಅಲ್ಲಿಗೆ ಕೈಬಿಟ್ಟರು. ಹಾಗೆಂದು ಅವರು ವ್ಯಸನವನ್ನು ಪಟ್ಟುಕೊಳ್ಳಲಿಲ್ಲ. ತಮ್ಮ ಮುಖ್ಯ ಉದ್ದೇಶವಾಗಿದ್ದ ವ್ಯಾಸಂಗದ ಕಡೆಗೆ ಹೆಚ್ಚಿನ ಒತ್ತನ್ನು ನೀಡಿದ್ದರು. ಆದ್ದರಿಂದಲೇ ಅವರಿಗೆ ಮೊದಲಸಲಕ್ಕೆ ತೇರ್ಗಡೆ ಹೊಂದುವ ಯೋಗ ಲಭಿಸಿತು. ಫಸ್ಟ್‌ಕ್ಲಾಸ್ ಅಲ್ಲದಿದ್ದರೂ ಅದಕ್ಕಿಂತ ಎಂಟು ಅಂಕ ಕಡಿಮೆ ಗಳಿಸಿಕೊಂಡಿದ್ದರು. ಅವರ ಮಾತಿನಲ್ಲೇ ಹೇಳುವುದಾದರೆ "ಅಂತೂ ಮೊದಲಸಲಕ್ಕೆ ತೇರ್ಗಡೆಯಾದೆ. ಫಸ್ಟ್ ಕ್ಲಾಸ್ ಇಲ್ಲ. ಅದಕ್ಕಿಂತ ಎಂಟು ಅಂಕ ಕಡಿಮೆ ಅಷ್ಟೆ. ೩೬೦ ಅಲ್ಲ, ೩೫೨ ಅಂಕ". ಅಂತೂ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ದೇವೀರಪ್ಪನವರು ಪ್ರತಿಭಾಶಾಲಿ ವಿದ್ಯಾರ್ಥಿ ಎಂಬುದು ಎಲ್ಲರಿಗೂ ಮನವರಿಕೆಯಾಗಿತ್ತು.

ದೇವೀರಪ್ಪನವರಿಗೆ ಯಾವಾಗಲೂ ಹಣದ ಸಮಸ್ಯೆಯೇ ಕಣ್ಣೆದುರು ಬರುತ್ತಿತ್ತು. ಏನೇ ಮಾಡಬೇಕೆಂದರೂ ಹಣವಿಲ್ಲದೆ ವ್ಯಾಸಂಗ ಮುಂದು ವರಿಸಲು ಸಾಧ್ಯವಾಗದು ಎಂಬುದನ್ನು ಹಲವಾರು ಬಾರಿ ಯೋಚಿಸುತ್ತಲೇ ಇದ್ದರು. ಮನೆಯಲ್ಲಿದ್ದ ಬಡತನ ಅವರನ್ನು ನಿತ್ಯವೂ ಇಂತಹ ಸಂದಿಗ್ಧಕ್ಕೆ ಒಳಪಡಿಸುತ್ತಲೇ ಇತ್ತು. ಅವರು ಅಂದುಕೊಳ್ಳುತ್ತಿದ್ದ ಮಾತಿನಲ್ಲಿ ಬಡತನದ ಬೇಗೆ ಎದ್ದುಕಾಣುತ್ತಿತ್ತು. "ಓದುವ ಹರೆಯ, ಓದುವ ಹುಮ್ಮಸ್ಸು- ಆದರೆ ಹಣ ಎಲ್ಲಿಂದ ತರುವುದು? ಬಡವರಿಗೆ ಸಾಲವನ್ನಾದರೂ ಕೊಡುವವರಾರು? ನಮ್ಮ ತಂದೆಯ ದುಡಿಮೆ ಹೊಟ್ಟೆಗೆ ಬಟ್ಟೆಗೆ ಸೇರ. ಕಾಲವೋ ಮೂರು ರೂಪಾಯಿಗೆ ಒಂದು ಪಲ್ಲ ಜೋಳ. ಎರಡೂ ಮುಕ್ಕಾಲು ರೂಪಾಯಿಗೆ ಪಲ್ಲಾ ರಾಗಿ, ಬತ್ತ ಐದು ರೂ. ರೈತರ ಕೈಯಲ್ಲಿ ಹಣ ಎಲ್ಲಿಂದ ಬರುತ್ತದೆ? ಆದರೆ ನಾನು ಸರ್ಕಾರಿ ಕೆಲಸಕ್ಕೆ ಹೋಗಬೇಕೆಂದು ಸೀರಿಯಸ್ ಆಗಿ ಪ್ರಯತ್ನಿಸುತ್ತಲೂ ಇರಲಿಲ್ಲ. ಮನೆಯಲ್ಲಿ ತಿಂದುಕೊಂಡು ಊರಲ್ಲೆಲ್ಲ ಅಲೆದುಕೊಂಡು ಇರುತ್ತಿದ್ದೆ. ಬೆಳಗುತ್ತಿ ಮಿಡಲ್ ಸ್ಕೂಲಿನಲ್ಲಿ ಸ್ವಯಂಸೇವಕನಂತೆ ಉಪಾಧ್ಯಾಯ ವೃತ್ತಿಯಲ್ಲಿ ಕೆಲವುದಿನ ಕೆಲಸ ಮಾಡಿದೆ. ಆಗ ನಮ್ಮೂರಿನಲ್ಲಿ ಶ್ರೀರಾಮ ಪಾದುಕಾ ಪಟ್ಟಾಭಿಷೇಕ

ನಾಟಕ ಕಲಿಯುತ್ತಿದ್ದರು. ಅವರೊಡನೆಯೂ ಸೇರಿ ಸುಮಂತನ ಪಾತ್ರ ವಹಿಸಿದ್ದೆ. ನಿಜ ಜೀವನದಲ್ಲಿ ಮಂತ್ರಿ ಆಗುವ ಛಾನ್ಸ್ ಕಳೆದುಕೊಂಡೆ" ಎಂದುಕೊಂಡಿರುವ ಮಾತುಗಳನ್ನು ಗಮನಿಸಿದಾಗ ಕಡು ಬಡತನದಲ್ಲೇ ಬದುಕುತ್ತಾ ಬಂದ ಇವರ ಕುಟುಂಬ ದೇವೀರಪ್ಪನವರ ಮೇಲೆ ಅಗಾಧ ಪರಿಣಾಮವನ್ನು ಬೀರುತ್ತಲೇ- ಹಣಕಾಸಿನ ಮುಗ್ಗಟ್ಟಿನ ಹಿನ್ನೆಲೆಯಲ್ಲಿ- ಬಂದಿರುವುದು ಕಂಡುಬರುತ್ತದೆ.

**ನಾಟಕ ನೋಡುವ ಹವ್ಯಾಸ :**

ಇವರಿಗೆ ದಾವಣಗೆರೆಯಲ್ಲಿ ಎಸ್.ಎಸ್.ಎಲ್.ಸಿ. ಓದುತ್ತಿದ್ದ ಸಂದರ್ಭದಲ್ಲಿ ಹಲವಾರು ನಾಟಕ ಕಂಪನಿಗಳ ನಾಟಕಗಳನ್ನು ನೋಡುವ ಅವಕಾಶ ಒದಗಿಬಂದಿತು. ಹಲಗೇರಿಯಿಂದ ಶಹಾಶಿವಾಜಿ, ಸ್ತ್ರೀ, ಬಿ.ಎ. ಮುಂತಾದ ನಾಟಕಗಳನ್ನು ನೋಡಿದರು. ಹಾಗೂ ಉತ್ತರ ಕರ್ನಾಟಕದವರ 'ಬೆಳವಡಿ ಮಲ್ಲಮ್ಮ' ಮಂಗಳೂರು ಕಂಪನಿಯವರ 'ರಾಯರ ಸೊಸೆ' ಮುಂತಾದ ನಾಟಕಗಳನ್ನು ನೋಡುತ್ತಲೇ ಅಲ್ಲಿನ ಪಾತ್ರಧಾರಿಗಳು ಅಭಿನಯಿಸುತ್ತಿದ್ದ ಅಭಿನಯ, ಸಂಭಾಷಣೆಗಳಿಗೆ ಮಾರುಹೋದರು. ಹಲಗೇರಿ ದೊಡ್ಡಜೆಟ್ಟೆಪ್ಪನವರು ಮಾತುಗಳನ್ನು ಅರ್ಥವತ್ತಾಗಿ, ಅಭಿನಯಪೂರ್ವಕವಾಗಿ ಆಡುತ್ತಿದ್ದುದು, ಸಣ್ಣಜೆಟ್ಟೆಪ್ಪನವರು ಮಾಡುತ್ತಿದ್ದ ಹಾಸ್ಯ ಇವರಿಗೆ ಅತ್ಯಂತ ಪ್ರಿಯವಾಗಿರುತ್ತಿದ್ದುವು. ತುಕಾರಾಂ-ಬುವಾ-ಶಿವಾಜಿ ಮುಂತಾದ ನಾಯಕರ ಪಾತ್ರದಲ್ಲಿ ಹಾಗೂ ಮುದ್ದೀರಪ್ಪ-ನಾಯಿಕೆಯ ಪಾತ್ರದಲ್ಲಿ ಅಭಿನಯಿಸುದ್ದುದನ್ನು ಕಂಡು ಇವರಿಗೆ ಆ ಪಾತ್ರಾಭಿನಯಗಳ ಬಗ್ಗೆ ಹೆಮ್ಮೆ ಮೂಡುತ್ತಿತ್ತು. ಆ ಕಾಲದಲ್ಲಿ ದಾವಣಗೆರೆಯಲ್ಲಿ ನಾಟಕ ಮತ್ತು ಕುಸ್ತಿ ಎರಡೇ ಮನರಂಜನಾ ಕಾರ್ಯಕ್ರಮಗಳಾಗಿ ಜನರಿಗೆ ರಂಜನೆ ನೀಡುತ್ತಿದ್ದವು. ಆಗ 'ಟಾಕೀ'ಗಳಿರಲಿಲ್ಲ. 'ಮೂಕಿ' ಗಳಿದ್ದವು. ಆದ್ದರಿಂದ ಇವುಗಳನ್ನೇ ನೋಡುತ್ತಿದ್ದರು. ಆದರೆ ಅದೇ 'ಮೂಕಿ'ಗಳನ್ನ ಈಗ ನೋಡುತ್ತಿದ್ದರೆ ತಮಾಷೆಯದಾಗಿರುತ್ತಿದ್ದುವೊ ಏನೊ ಎಂದು ಹೇಳಿಕೊಂಡಿದ್ದಾರೆ.

**ಬಡವರಿಗೆ ೩ನೇ ರ್‍ಯಾಂಕ್ :**

ಆಗಿನ ಅವರ ವಿದ್ಯಾರ್ಥಿ ಜೀವನ ಹೇಗಿತ್ತು ಎಂಬ ಬಗ್ಗೆ ಅವರ ಮಾತುಗಳಲ್ಲೇ ಕೇಳಬಹುದು. "ಆಗಿನ ವಿದ್ಯಾರ್ಥಿ ಜೀವನದಲ್ಲಿ-ಹೈಸ್ಕೂಲ್‌ನಲ್ಲಿ

ತುಂಬ ಸಂಯಮಯುತವಾಗಿರುತ್ತಿದ್ದಿತು. ಉಪಾಧ್ಯಾಯರಲ್ಲಿ ವಿದ್ಯಾರ್ಥಿಗಳು ಪ್ರೀತಿ ಗೌರವಗಳನ್ನಿಟ್ಟಿರುತ್ತಿದ್ದರು. ಆದರೆ ಆ ಕಾಲದಲ್ಲಿಯೂ ಬ್ರಾಹ್ಮಣೇತರ ಬಡ ವಿದ್ಯಾರ್ಥಿಗಳಿಗೆ ಸರಿಯಾದ ಮಾರ್ಗದರ್ಶನ ಇರುತ್ತಿರಲಿಲ್ಲ. ಶ್ರೀಮಂತ ರಾದ ದಡ್ಡ ವಿದ್ಯಾರ್ಥಿಗಳ ಮೇಲೆ, ಅವರಲ್ಲಿರುವ ಹಣದ ಮೇಲೆ ಕಣ್ಣಿಟ್ಟು, ಅವರಿಗೆ ಪ್ರೋತ್ಸಾಹಿಸುತ್ತಿದ್ದರು. ನಾನು ನನ್ನ ತರಗತಿಯ ವಿದ್ಯಾರ್ಥಿಗಳಲ್ಲೆಲ್ಲಾ ಅತ್ಯಂತ ಮೇಧಾವಿ. ಆದರೆ ಮೊದಲನೆಯ ರ್‍ಯಾಂಕ್ ಬ್ರಾಹ್ಮಣ ಹುಡುಗಿಗೆ. ದ್ವಿತೀಯ ರ್‍ಯಾಂಕ್ ಉಪಾಧ್ಯಾಯರಿಂದ ಖಾಸಗಿಯಾಗಿ ಪಾಠ ಹೇಳಿಸಿ ಕೊಡುತ್ತಿದ್ದವರಿಗೆ. ನನಗೆ ಮಾತ್ರ ಇನ್ನೇ ರ್‍ಯಾಂಕ್". ಹೀಗೆ ಆಗಿನ ತಮ್ಮ ವಿದ್ಯಾರ್ಥಿದೆಸೆಯಲ್ಲಿ ತಮಗಾದ ನೋವುಗಳನ್ನು ಹಲವರ ಬಳಿಯೂ ಹೇಳಿಕೊಳ್ಳುತ್ತಿದ್ದರು. ಕೊನೆಗೆ, ಏನು ಮಾಡುವುದು ಇದೆಲ್ಲ ಹೀಗೆಂದೇ ಆಗುತ್ತಲೇ ಇರುತ್ತದೆ ಎಂದು ಸುಮ್ಮನಾಗುತ್ತಿದ್ದರು.

ದಾವಣಗೆರೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಊರಿಗೆ ಬಂದು ಹೋಗಲು ತುಂಬಾ ಯೋಚಿಸುತ್ತಿದ್ದರು. ಕಾರಣ ಹಣವನ್ನು ಹೇಗೆ ಹೊಂದಿಸಿಕೊಳ್ಳಬೇಕು? ಯಾರನ್ನು ಕೇಳುವುದು ? ಹಾಗಾಗಿ ಎರಡು ತಿಂಗಳಿಗೊಮ್ಮೆ, ಮೂರು ತಿಂಗಳಿಗೊಮ್ಮೆ ಊರಿಗೆ ಬಂದು ಹೋಗುತ್ತಿದ್ದರು. ಊರಿಗೆ ಬಂದಾಗಲೂ ದುಡ್ಡಿಲ್ಲದೆ ಅನೇಕ ತೊಂದರೆ ಅನುಭವಿಸಿದ್ದುಂಟು. ಊರಿನಿಂದ ಅಲ್ಪಸ್ವಲ್ಪ ಹಣಜೋಡಿಸಿಕೊಂಡು ಬಂದರೂ ಕೂಡ ಊರಿಗೆ ಬಂದು ಹೋಗುವ ಖರ್ಚನ್ನು ಕಳೆದು ನಾಲ್ಕಾರು ರೂಪಾಯಿ ಮಾತ್ರ ಕೈಯಲ್ಲಿ ಉಳಿಯುತ್ತಿತ್ತು. 'ಹಾಫ್ ಫ್ರೀಷಿಪ್' ದೊರಕುತ್ತಿದ್ದ ಕಾರಣ ಕಾಲಹರಣ ಮಾಡಿ ಓಡಾಡಿಕೊಂಡಿದ್ದ ಹೊತ್ತಿನಲ್ಲಿ ಫಿಫ್ತ್ ಟರ್ಮ್‌ನಲ್ಲಿ ಟರ್ಮ್ ಹೋಗಿಬಿಟ್ಟಿತ್ತಂತೆ. ರಜಾ ಮುಗಿಸಿಕೊಂಡು ದಾವಣಗೆರೆಗೆ ಹೋದ ಮೇಲೆಯೇ ಅವರಿಗೆ ಗೊತ್ತಾಯಿತಂತೆ. "ಸೆಕೆಂಡ್ ಟರ್ಮ್ ಪರೀಕ್ಷೆಯಲ್ಲಿ ಫಸ್ಟ್ ರ್‍ಯಾಂಕ್ ಬಂದಿತ್ತು. ಆದರೆ ಟರ್ಮ್ ಇರಲೇ ಇಲ್ಲ. ಹೆಡ್ ಮಾಸ್ಟರ್ ಆಗಿದ್ದವರು ಎರಡು ಮೂರು ಸಲ ವಿದ್ಯಾ ಇಲಾಖೆಗೆ ಶಿಫಾರಸ್ಸು ಮಾಡಿ ಬಹು ಕಷ್ಟಪಟ್ಟು ಎಕ್ಸ್‌ಟೆನ್ಷನ್ ತರಿಸಿದ್ದರು. ಆಗ ಶ್ರೀ ಪುಟ್ಟಣ್ಣಶಾಸ್ತ್ರಿ ಎಂಬುವವರು ಹೆಡ್ ಮಾಸ್ಟರ್. ಪ್ರತಿಭಾಶಾಲಿಗಳಾದ ವಿದ್ಯಾರ್ಥಿಗಳ ಮೇಲೆ ತುಂಬಾ ಅಭಿಮಾನ. ನನ್ನ ಬಡತನವನ್ನು ಕಂಡು ಅವರೇ ತುಂಬಾ ಚೆನ್ನಾಗಿ ಶಿಫಾರಸ್ಸು ಮಾಡಿ ವಿದ್ಯಾರ್ಥಿ ವೇತನ ತರಿಸಿಕೊಟ್ಟರು. ತಿಂಗಳಿಗೆ ಎಂಟು ರೂಪಾಯಿ ! ಯಾವ ಶ್ರೀಮಂತನಿಗೆ ಕಡಿಮೆ ನಾನು ? ಎಂದು ಹಿಗ್ಗಿದೆ" ಹೀಗೆ ತಮ್ಮ ಗುರು ಪುಟ್ಟಣ್ಣಶಾಸ್ತ್ರಿ ಎಂಬ ಗುರುಗಳು ಸಹಾಯ ಮಾಡಿದ ಬಗ್ಗೆ ಹೆಮ್ಮೆಯಿಂದ

ಹೇಳಿಕೊಂಡಿದ್ದಾರೆ. ಆಗ ದೊರಕಿದಂತಹ ಎಂಟುರೂಪಾಯಿ ವಿದ್ಯಾರ್ಥಿ ವೇತನ ಯಾವ ಶ್ರೀಮಂತನಿಗೂ ಕಡಿಮೆ ಇಲ್ಲದ್ದು ಎಂಬ ಬಿಗುಮಾನ ದೇವೀರಪ್ಪನವರಿಗೆ ಅತ್ಯಂತ ಖುಷಿಯನ್ನೇ ತಂದುಕೊಟ್ಟಿದೆ.

## You value any Six ! :

ದೇವೀರಪ್ಪನವರು ತಮ್ಮ ಪ್ರತಿಭಾ ಸಾಮರ್ಥ್ಯದ ಬಗ್ಗೆ ಯಾವ ಅಳುಕೂ ಇಲ್ಲದೆ, ಅಹಂಕಾರವನ್ನು ತೋರದೆ ನೇರವಾಗಿ ಹೇಳಿಕೊಂಡಿದ್ದಾರೆ. ಯಾರೇ ಆಗಲಿ ಪರೀಕ್ಷೆಯಲ್ಲಿ ಕೇಳಿದಷ್ಟಕ್ಕೆ ಉತ್ತರಿಸಬೇಕು ತಾನೆ ? ಎಲ್ಲವನ್ನು ಬರೆದಿರುವೆ. ನೀವೇ ಬೇಕಾದರೆ ಆಯ್ಕೆ ಮಾಡಿಕೊಂಡು ಮೌಲ್ಯಮಾಪನ ಮಾಡಿ– ಎಂಬ ದಿಟ್ಟತನ ತೋರುವುದು ಯಾವ ವಿದ್ಯಾರ್ಥಿಗೆ ಬರಲು ಸಾಧ್ಯ? ಅವರ ಮಾತುಗಳಲ್ಲೇ ಕೇಳಿ : "ಫಿಫ್ತ್ ಟರ್ಮ್‌ನಲ್ಲಿ ಓದುತ್ತಿದ್ದಾಗ ಸೆಕೆಂಡ್ ಟರ್ಮ್ ಎಕ್ಸಾಂನಲ್ಲಿ ಒಂದು ದಾರ್ಷ್ಟ್ಯದ ಕೆಲಸ. ಮ್ಯಾಥ್ಸ್‌ನಲ್ಲಿ ನನ್ನನ್ನು ಯಾರೂ ಮೀರಿಸುತ್ತಿರಲಿಲ್ಲ. ಅಂಕಗಣಿತ ಪ್ರಶ್ನೆ ಪತ್ರಿಕೆಯಲ್ಲಿ Answer any six (or eight I do not know) ಎಂದು ನಿರ್ದೇಶಿಸಲಾಗಿತ್ತು. ನಾನು ಎಲ್ಲ ಪ್ರಶ್ನೆಗಳಿಗೂ ಸರಿಯಾದ ಉತ್ತರ ಬರೆದು– ಎಲ್ಲಾ ಲೆಕ್ಕಗಳನ್ನು ಮಾಡಿ– You value any six (eight)! ಎಂದು ಉತ್ತರ ಪತ್ರಿಕೆಯಲ್ಲಿ ಸವಾಲ್ ಹಾಕಿದ್ದೆ! ಗಣಿತದ ಉಪಾಧ್ಯಾಯರು ಅದನ್ನು ಕಂಡು ಮೆಚ್ಚಿಕೊಂಡರೇ ಹೊರತು ಬಯ್ಯಲಿಲ್ಲ".

ದಾವಣಗೆರೆಯಲ್ಲಿ ಎಸ್‌ಎಸ್‌ಎಲ್‌ಸಿಯಲ್ಲಿ ತೇರ್ಗಡೆಯನ್ನೇನೊ ಹೊಂದಿದರೂ ಆಗ ಅವರಿಗೆ ಕಾಡಿದ ಪ್ರಶ್ನೆ ಮುಂದೇನು? ಎಂಬುದು. ಜೊತೆಗೇ ಹಣದ ಸಮಸ್ಯೆ ಇದ್ದುದು. ಶಿವಮೊಗ್ಗಕ್ಕೆ ಹೋಗಿ ಓದುವುದು ಎಂಬ ನಿರ್ಧಾರಕ್ಕೆ ಬಂದರು. ಅಲ್ಲಿಗೆ ಹೋಗಿ ವಿಚಾರಿಸಲಾಗಿ Arts ಮಾತ್ರ ಇದ್ದದ್ದು ತಿಳಿಯಿತು. PCM ಓದಬೇಕೆಂಬ ಬಯಕೆ ಇದ್ದಿದ್ದರಿಂದ ಒಂದು ಸಲ ಡಿ. ಪಂಚಾಕ್ಷರಯ್ಯ ಎಂಬುವವರು ಬೆಂಗಳೂರಿಗೆ ಹೋಗಿ PCM ತೆಗೆದುಕೊಂಡು ಓದು ಎಂದು ಸೂಚಿಸಿದರು. ಇದ್ಯಾವುದೂ ಸಾಧ್ಯವಾಗದು ಎಂದು Artsನ್ನು ಓದಲಿಕ್ಕೆ ಮನಸ್ಸು ಇಲ್ಲದ್ದರಿಂದ ಮರಳಿ ಊರಿಗೆ ವಾಪಸ್ಸಾದರು. ಈ ಹಿಂದೆ ಹೇಳಿದಂತೆ ಓದುವ ಹರೆಯ, ಹುಮ್ಮಸ್ಸು ಇದ್ದಾಗ ದೇವೀರಪ್ಪನವರಿಗೆ ಕಾಲಕೂಡಿ ಬರಲಿಲ್ಲ. ಹಾಗಾಗಿ ಕೆಲವು ಕಾಲ ಊರಲ್ಲೇ ಕಾಲಹರಣ ಮಾಡಿಕೊಂಡು ಕಾಲಕಳೆಯ ಬೇಕಾಯಿತು.

**ಸಾರ್ಥಕ ಕೆಲಸ :**

ಎಸ್‌ಎಸ್‌ಎಲ್‌ಸಿ ಮುಗಿಸಿಕೊಂಡು ಎರಡು ವರ್ಷಕಾಲ ಅಂದರೆ ೧೯೩೨–೩೪ರ ಅವಧಿಯಲ್ಲಿ ಊರಲ್ಲೇ ಇದ್ದಾಗಲೂ ಇವರು ಸುಮ್ಮನೆ ಕೂರುವ ಪ್ರವೃತ್ತಿ ತೋರಲಿಲ್ಲ. ಮಿಡಲ್ ಸ್ಕೂಲ್ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಪಾಠಹೇಳಿಕೊಡತೊಡಗಿದರು. ಸ್ವಲ್ಪ ದಿನ ಆದ ಮೇಲೆ ಅದನ್ನು ಕೈಬಿಟ್ಟರು. ಆದರೂ ಈ ಸಂದರ್ಭದಲ್ಲಿ ತಮ್ಮಿಂದ ಕಲಿತ ವಿದ್ಯಾರ್ಥಿಗಳಲ್ಲಿ ಕೆಲವರ ಬಗ್ಗೆ ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದುದು ಹೀಗಿದೆ : "ಅಂತಹ ವಿದ್ಯಾರ್ಥಿಗಳಲ್ಲಿ ಲಿಂಗೈಕ್ಯ ಎಸ್. ತೀರ್ಥಪ್ಪ ಬಿ.ಎ., ಎಲ್‌ಎಲ್‌ಬಿ ಒಬ್ಬರು. ನಾನಿಲ್ಲದಿದ್ದರೆ ಅವನು ರೈತಾಪಿ ಕೆಲಸ ಮಾಡುತ್ತಿದ್ದ. ಅವನಿಗೆ ಮುಂದೆ ಹೈಸ್ಕೂಲಿನಲ್ಲಿ ಓದುವುದಕ್ಕೂ ಅನುಕೂಲ ಮಾಡಿಕೊಟ್ಟೆ. ಡಿ.ಬಸಪ್ಪ ಲಾಯರ್ ಶಿವಮೊಗ್ಗ, ಇನ್ನೊಬ್ಬ ಎಚ್. ರಾಜಣ್ಣ ಅಂತ. ಇವರಿಗೆಲ್ಲಾ ಬಡವರು ಓದುವುದು ಹೇಗೆಂಬ ಬಗ್ಗೆ ಮಾರ್ಗದರ್ಶನ ಮಾಡಿದೆ. ಇವರಲ್ಲೊಬ್ಬ ಎಸ್. ತೀರ್ಥಪ್ಪ ವಕೀಲನಾಗಿ ನನ್ನ ಆತ್ಮೀಯ ಗೆಳೆಯನಾಗಿದ್ದ. ನನ್ನ ದುರ್ದೈವದಿಂದ ಅವನು ನಾನಿನ್ನು ಇರುವಾಗಲೇ ಕಣ್ಮರೆಯಾದ. ಈಗ ಇದ್ದಿದ್ದರೆ ಅವನೂ ಒಬ್ಬ ಎಂ.ಎಲ್.ಎ ಯೋ, ಮಂತ್ರಿಯೋ ಆಗಿರುತ್ತಿದ್ದ. ನಾನು ಎಸ್.ಎಸ್.ಎಲ್.ಸಿ. ಮಾಡಿಕೊಂಡು ಎರಡು ವರ್ಷ ಊರಿನಲ್ಲಿಯೇ ಉಳಿದಿದ್ದರಿಂದ ಈ ನಾಲ್ವರನ್ನು ವಿದ್ಯಾವಂತರನ್ನಾಗಿ ಮಾಡಿದೆ. ಆ ದೃಷ್ಟಿಯಿಂದ ಆ ನನ್ನ ಎರಡು ವರ್ಷ ಸಾರ್ಥಕ."

ದೇವೀರಪ್ಪನವರು ಎಲ್ಲಿಯೇ ಇರಲಿ ಸುಮ್ಮನೆ ಕೂರುತ್ತಿದ್ದ ಸ್ವಭಾವ ದವರಾಗಿರಲಿಲ್ಲ ಎಂಬುದಕ್ಕೆ ಮೇಲಿನ ಘಟನೆಯೇ ಸಾಕ್ಷಿ. ತಮಗೇ ನೂರೆಂಟು ತೊಂದರೆಗಳಿರುವಾಗ ಅದನ್ನು ಸಹಿಸಿಕೊಂಡು ನಾಲ್ವರಿಗೆ ವಿದ್ಯಾದಾನ ಮಾಡಿ, ಸೂಕ್ತ ಮಾರ್ಗದರ್ಶನ ಕೊಟ್ಟು, ಬಡತನದ ಮಧ್ಯೆಯೂ ಓದುವ ಹವ್ಯಾಸವನ್ನು ಬೆಳೆಸಿ, ಉನ್ನತ ಹುದ್ದೆಯನ್ನು ಅಲಂಕರಿಸುವ ಹಂತಕ್ಕೆ ತಂದು ನಿಲ್ಲಿಸಿದ ಕೀರ್ತಿಗೆ ದೇವೀರಪ್ಪನವರು ಭಾಜನರಾಗಿದ್ದಾರೆ. ಇವರ ಪರೋಪಕಾರದ ಮನೋಭಾವ ಮರೆಯಲಾಗದಂಥದ್ದು.

**ಗೆಳೆಯರ ಸ್ಮರಣೆ :**

ದೇವೀರಪ್ಪನವರು ಮತ್ತೆ ಕೆಲವರಿಗೆ ಸಹಾಯ ಮಾಡಿದ್ದನ್ನೂ ಅವರೂ ತನಗೆ ಸಹಾಯ ಮಾಡಿದ್ದನ್ನು ನೆನಪಿಸಿಕೊಳ್ಳುತ್ತಾರೆ : "ಎಂ. ಪರಮೇಶ್ವರಯ್ಯ ಎಂಬುವವರಿಗೂ ನಾನು ಹಲವು ರೀತಿಯಲ್ಲಿ ಮಾರ್ಗದರ್ಶನ ಮಾಡಿದೆ.

ಈ ಕೆಲಸಕ್ಕೆ, ನಾನು ಓದುವುದಕ್ಕೆ ಸಹ, ಪ್ರೋತ್ಸಾಹವನ್ನು ಕೊಂಚಮಟ್ಟಿಗೆ ತನ್ನ ಕೈಲಾದಷ್ಟು ಧನಸಹಾಯವನ್ನು ಮಾಡುತ್ತಿದ್ದವರು ನನ್ನ ಸ್ನೇಹಿತ ಎಂ.ಮರುಳಸಿದ್ದಯ್ಯ ಎಂಬುವವರು. ಅವರು 'ಮೇಸ್ಟರ್' ಆಗಿದ್ದವರು ಅದರಲ್ಲಿ ರುಚಿಕಾಣದೆ ಊರಲ್ಲಿಯೇ ನಿಂತು ಹೊಲಮನೆ ಕೆಲಸ ನೋಡಿಕೊಳ್ಳುತ್ತಿದ್ದರು. ೧೯೪೨ರ ಚಳುವಳಿಯಲ್ಲಿ ಜೈಲಿಗೂ ಹೋಗಿದ್ದರು. ೧೯೪೭ರ ಚಳುವಳಿಯಲ್ಲಿಯೂ ಜೈಲುವಾಸ ಅನುಭವಿಸಿದರು. ತಾಮ್ರಪತ್ರಕ್ಕೆ ಅವರು ಕೈ ನೀಡಲಿಲ್ಲ. ಕಾಂಗ್ರೆಸ್ ಪಿಂಚಣಿಗೆ ಆಸೆಪಡಲಿಲ್ಲ. "ಥೂ ಎಂತಾ ಪಾಪಿ ಸೂಳೆ ಮಕ್ಕಳ್ರೀ ಇವರು? ದೇಶ ಸೇವೆ ಮಾಡಿದೆವು. ಅದಕ್ಕೆ ಪಿಂಚಣಿ ಕೇಳುತ್ತಾವಲ್ಲ ಇವು ? ಇವು ಏನು ಮನುಷ್ಯರೋ ದನಗಳೋ? ಸ್ವಾರ್ಥಸಾಧನೆಗಾಗಿ ಜೈಲುಗಳಿಗೆ ಹೋಗಿದ್ದರೇ ಇವರು? ಅಮ್ಮನಿಗೆ ನಮಸ್ಕಾರ ಮಾಡಿದ್ದಕ್ಕೆ ಛೀ ಕೇಳೋ ಜನ ಇವರು" ಎಂದು ಬಯ್ಯುತ್ತಿರುತ್ತಾರೆ. "ಆ ಪಿಂಚಣಿ ತಗೊಂಡು ಯಾರಿಗಾದರೂ ಕೊಡು. ಇಲ್ಲವೆ ಯಾವುದಾದರೂ ಧರ್ಮಕಾರ್ಯಕ್ಕೆ ವಿನಿಯೋಗಿಸು" ಎಂದರೆ "ಆಗುವುದಿಲ್ಲ ನನ್ನ ವ್ಯಕ್ತಿತ್ವ ಮಾರಿಕೊಂಡು ನನ್ನ ಮುಖಕ್ಕೆ ಮಸಿ ಬಳಿದುಕೊಂಡು ಆ ಕೆಲಸ ಮಾಡಬೇಕೆ" ಎನ್ನುತ್ತಾನೆ. ಆತ ಉಜ್ಜನಿಯ ಮರುಳುಸಿದ್ಧನ ಒಕ್ಕಲು. ಮೊದಲ ಹೆಸರು ಉಜ್ಜಪ್ಪ, ಯಾಕೊ 'ಉಜ್ಜಪ್ಪ ಹಲ್ಲುಜ್ಜಪ್ಪಾ' ಎಂದು ಹಾಸ್ಯ ಮಾಡಿದರಂತೆ. ಆಗಲೇ, ಮರುಳುಸಿದ್ಧಯ್ಯ ಎಂದು ಹೆಸರು ಬದಲಾಯಿಸಿಕೊಂಡಿದ್ದಾನೆ. ಅಂತೂ ತುಂಬಾ ಸ್ವಾರಸ್ಯಕರ ವ್ಯಕ್ತಿ. ಅವನು ನನ್ನ ಆತ್ಮೀಯ ಗೆಳೆಯ. ಅವನನ್ನು ನೋಡುವುದಕ್ಕಾಗಿಯೇ ನಾನು ಆಗಾಗ ನಮ್ಮೂರಿಗೆ ಹೋಗುತ್ತಿರುತ್ತೇನೆ. ನಮ್ಮ ಊರು ಎಂತಹುದು, ಆ 'ಎರೆ' ಎಂತಹ 'ದೊರೆ' ಎಂಬುದನ್ನು ನನ್ನ 'ಬೆಳುವಲದ ಮಡಿಲಲ್ಲಿ' ಕಾದಂಬರಿಯಲ್ಲಿ ಸ್ವಲ್ಪ ಕೊಟ್ಟಿದ್ದೇನೆ. ಈತನಿಂದ ನನ್ನ ಓದಿಗೆ ತುಂಬ ಉತ್ತೇಜನ ದೊರೆಯಿತು. ಈತನೂ ನಾನು ಸಹಪಾಠಿಗಳು. ಈತ, ನಾನು ಕಳೆದುಕೊಂಡ ಎಸ್. ತೀರ್ಥಪ್ಪ, ನಾನು ಊರಲ್ಲಿ ಸೇರಿದೆವೆಂದರೆ ಜನರು ತ್ರಿಮೂರ್ತಿಗಳು ಸೇರಿದುವು ಎನ್ನುತ್ತಿದ್ದರು. ನಾವು, ಇನ್ನುಳಿದ ಕೆಲವರು ಗೆಳೆಯರು ಊರಿನಲ್ಲಿದ್ದಾಗ ಯಾವ ಅನ್ಯಾಯಗಳು ಕಳವು ಹೊಡೆದಾಟ ಗುದ್ದಾಟ ನಡೆಯುತ್ತಿರಲಿಲ್ಲ. ಊರಿನ ಮುಖಂಡರು ನಮಗೆ ಹೆದರಿಕೊಂಡು ವರ್ತಿಸುತ್ತಿದ್ದರು. ಒಂದು ಸಲ ನಾನು ಬಿ.ಎ. ಗೆ ಸೇರುವುದಕ್ಕೆ ಮುಂಚೆ, ಮಾತ್ರ, ಬೆಳಗುತ್ತಿಯ ಅರಸುಮನೆತನದವರು ನನ್ನ ಮೇಲೆ ಬಿದ್ದಿದ್ದರು ಅಷ್ಟೆ. ಆದರೆ ಎಂದೂ ಅವರಾರೂ ನಮಗೆ ಸಾಲ ಕೊಡುತ್ತಿರಲಿಲ್ಲ. ಓದಿದವರು ಗಂಟುಕಳ್ಳರು ಎಂದು ಹೇಳುತ್ತಾ ಹಣ ಕೊಡುವವರಿಗೂ

ಹೆದರಿಸುತ್ತಿದ್ದರು. ಇದೇನೆ ಇದ್ದರೂ ನಾನು ಎರಡು ವರ್ಷ ಊರಿನಲ್ಲಿಯೇ ಇದ್ದಿದ್ದರಿಂದ ಪರೋಕ್ಷವಾಗಿ ಹಲವು ಅನುಭವಗಳಾದವು. ಇಬ್ಬರು ಡಬ್ಬಲ್ ಗ್ರಾಜುಯೇಟ್ ಆಗುವುದಕ್ಕೆ ನಾನೇ ಕಾರಣನಾದೆ"

ದೇವೀರಪ್ಪನವರದು ನಿರಂತರ ಹೋರಾಟದ ಬದುಕು. ಹಾಗಾಗಿಯೇ ಅವರು ಪ್ರತಿಯೊಂದು ಹೆಜ್ಜೆ ಇಡುವಾಗಲೂ ಎಚ್ಚರಿಕೆಯಿಂದ ಇಡುತ್ತಿದ್ದರು. ತಮ್ಮಿಂದ ಇತರರಿಗೆ ಅನುಕೂಲವಾಗುವಾಗಲೂ, ಊರಿಗೆ ಒಳ್ಳೆಯದು ಉಂಟಾಗುವಾಗಲೂ ತಮ್ಮ ನಿಷ್ಕಲ್ಮಶ ಸೇವೆಯಿಂದ ಅವಿರತವಾಗಿ ದುಡಿಯುತ್ತಿದ್ದರು. ಜೀವನದಲ್ಲಿ ಯಾರಿಗಾದರೂ ಸಹಾಯ ಮಾಡಿದ್ದಾದರೆ ಅದನ್ನು ಎಂದೆಂದಿಗೂ ನೆನೆದುಕೊಳ್ಳುವಷ್ಟು ಗಾಢ ಪ್ರಭಾವ ಬೀರುವ ಹಾಗೆ ಕೂಡಿರಬೇಕು ಎಂಬುದು ಮೇಲಿನ ಘಟನೆಯಿಂದ ತಿಳಿದುಬರುತ್ತದೆ. ಆದ್ದರಿಂದಾಗಿ ಅದನ್ನು ದೇವೀರಪ್ಪನವರು ಕೆಲವೊಂದು ಘಟನೆಗಳನ್ನು ಹೀಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದುದರಲ್ಲಿ ಆಶ್ಚರ್ಯ ಪಡಬೇಕಿಲ್ಲ.

**ಇಂಟರ್‌ಮೀಡಿಯೇಟ್ ವ್ಯಾಸಂಗ :**

೧೯೩೪ರ ಫೆಬ್ರವರಿಯೋ ಮಾರ್ಚಿಯೋ. ಮುಂದೆ ಇಂಟರ್ ಮೀಡಿಯೇಟ್‌ಗೆ ಸೇರಿಕೊಳ್ಳಬೇಕು. ಎಲ್ಲಿ ಸೇರಿಕೊಳ್ಳಬೇಕು, ಯಾವ ವಿಷಯ ತೆಗೆದುಕೊಳ್ಳಬೇಕು ಎಂಬ ಆಲೋಚನೆ ಶುರುವಾಯಿತು. ಶಿವಮೊಗ್ಗದಲ್ಲಿ ಸೇರಿಕೊಂಡರೆ ಕೇವಲ ಆರ್ಟ್ಸ್ ಮಾತ್ರ ಇತ್ತು. ಪಿಸಿಎಂ ಓದಬೇಕೆಂಬ ಆಕಾಂಕ್ಷೆ ಇದ್ದ ಕಾರಣ ಈ ಬಗ್ಗೆ ಯೋಚನೆ ಕಾಡತೊಡಗಿತು. ಈ ಸಂದರ್ಭದಲ್ಲಿ ಚಿತ್ರದುರ್ಗದಲ್ಲಿ ಲಾಯರ್ ಆಗಿದ್ದ ಶಿವಲಿಂಗಪ್ಪ ಎಂಬುವವರು ಶಿವಮೊಗ್ಗದಲ್ಲಿ ಭೇಟಿಯಾದರು. ಇಂತಹ ಅವಕಾಶವನ್ನು ಉಪಯೋಗಿಸಿ ಕೊಂಡ ದೇವೀರಪ್ಪನವರು ಅವರ ಮಾರ್ಗದರ್ಶನದಂತೆ ನಡೆದುಕೊಂಡರು. ಶಿವಲಿಂಗಪ್ಪನವರು ದೇವೀರಪ್ಪನವರ ಕ್ಷೇಮ ಸಮಾಚಾರಗಳನ್ನೆಲ್ಲಾ ತಿಳಿದು ಕೊಂಡು ಹುಡುಗನ ಆಕಾಂಕ್ಷೆಯನ್ನು ಕ್ಷಣ ಮಾತ್ರದಲ್ಲಿ ಅರಿತುಕೊಂಡರು. ಕೂಡಲೇ "ನಿನಗೆ ಅಂಕಗಳು ಚನ್ನಾಗಿ ಬಂದಿವೆ. ತೋಟದಪ್ಪನವರ ಛತ್ರದಲ್ಲಿ ಉಚಿತ ವಿದ್ಯಾರ್ಥಿನಿಲಯದಲ್ಲಿ ಅವಕಾಶವಾಗುತ್ತದೆ. ವಿದ್ಯಾರ್ಥಿ ವೇತನವೂ ದೊರೆಯುತ್ತದೆ. ಅರ್ಜಿ ಹಾಕು. ಮನೆಯಲ್ಲಿ ಏಕೆ ಕುಳಿತಿದ್ದೀ?" ಎಂದರು. ಶಿವಲಿಂಗಪ್ಪನವರ ಮಾತನ್ನು ಕೇಳಿದ ದೇವೀರಪ್ಪನವರಿಗೆ ಎಲ್ಲಿಲ್ಲದ ಉತ್ಸಾಹ ಚಿಮ್ಮಿ ಉಕ್ಕಿ ಹರಿದಿತು. ಅವರ ಮಾರ್ಗದರ್ಶನದಂತೆ ಬೆಂಗಳೂರಿಗೆ ಹೋಗಿ ಅರ್ಜಿಯನ್ನು ಹಾಕಿಯೇ ಬಿಟ್ಟರು. ಅಲ್ಲಿ ಸೀಟೂ ಸಿಕ್ಕಿತು. ಕಾಲೇಜಿಗೆ

ಹೋಗಿ ಸೇರಿಕೊಂಡರು. ಇಂಟರ್‌ಮೀಡಿಯಟ್‌ನಲ್ಲಿ ಪಿಸಿಎಂ ತೆಗೆದುಕೊಂಡು ವ್ಯಾಸಂಗ ಮುಂದುವರಿಸಿದರು. ಇವರು ಕಾಲೇಜಿಗೆ ಸೇರಿಕೊಂಡಿದ್ದ ವೇಳೆಯಲ್ಲಿ ಲೀಡಿಂಗ್ ಟು ಎಂಜಿನಿಯರಿಂಗ್ ವ್ಯಾಸಂಗ ವಿಭಾಗ ಇರಲಿಲ್ಲ. ಅದಾಗಲೇ ಮುಚ್ಚಿ ಹೋಗಿತ್ತು. ಹಾಗಾಗಿ ಪಿಸಿಎಂ ತೆಗೆದುಕೊಂಡೆ ಎಂದು ಹೇಳಿದ್ದಾರೆ.

ಕೆಲವು ದಿನಗಳೂ ಪಿಸಿಎಂ ತರಗತಿಗೆ ತಪ್ಪದೇ ಹೋಗಿ ಬರುತ್ತಿದ್ದರು. ಈ ಸಂದರ್ಭದಲ್ಲಿ ಇವರ ಸಹಪಾಠಿಗಳನೇಕರು ಆರ್ಟ್ಸ್ ವಿಭಾಗದಲ್ಲಿ ವ್ಯಾಸಂಗ ಮಾಡುತ್ತಿದ್ದರು. ಇವರ ಕಾಲೇಜಿಗೆ ಆ ವರ್ಷ ವೇತನ ಸಮಿತಿಯ ನಿರ್ವಾಹಕರು (ಕನ್‌ವೀನರ್) ಪ್ರಣತಾರ್ಥಿಹರನ್ ಎಂಬುವವರಾಗಿದ್ದರು. ಅವರು ಚರಿತ್ರೆ ಮತ್ತು ಅರ್ಥಶಾಸ್ತ್ರ ಬೋಧಿಸುತ್ತಿದ್ದರು. ಆರ್ಟ್ಸ್ ವಿದ್ಯಾರ್ಥಿಗಳಿಗೆ ಇವರನ್ನು ಕಂಡರೆ ತುಂಬಾ ಅಭಿಮಾನವಿತ್ತು. ಹಾಗಾಗಿ ಆರ್ಟ್ಸ್ ವಿಭಾಗದ ಗೆಳೆಯರು ದೇವೀರಪ್ಪನವರಿಗೆ ನೀನೂ ಆರ್ಟ್ಸ್ ತೆಗೆದುಕೊ ಎಂದು ಒತ್ತಾಯಿಸಿದರು. ಸಹಪಾಠಿಗಳು ಹೇಳುವುದೇನೋ ಸರಿಯಿದ್ದಂತೆ ಕಂಡಿತು. ಏಕೆಂದರೆ ಇವರು ಪಿಸಿಎಂನ ಪ್ರಾಕ್ಟಿಕಲ್ ನೋಟ್ ಬುಕ್ ಇತ್ಯಾದಿಗಳನ್ನು ತೆಗೆದುಕೊಳ್ಳಲು ಹಣವಿಲ್ಲದೆ ಒದ್ದಾಡುತ್ತಿದ್ದರು. ಶಿವಮೊಗ್ಗದಿಂದ ಬೆಂಗಳೂರಿಗೆ ಬಂದು ಪಿಸಿಎಂ ತೆಗೆದುಕೊಂಡಿದ್ದರೂ ಕೊನೆಗೆ ಆರ್ಟ್ಸ್ ವಿಭಾಗಕ್ಕೆ ಬದಲಾಯಿಸಿಕೊಂಡೇಬಿಟ್ಟರು. ಹಾಗಾಗಿ ಇವರು ಯಾವ ಪುಸ್ತಕವನ್ನು ಕೊಂಡು ಓದಲಾಗುತ್ತಿದ್ದಿಲ್ಲವಂತೆ. ಅವರಿವರಿಂದ ಪುಸ್ತಕಗಳನ್ನೂ ಎರವಲಾಗಿ ಪಡೆದುಕೊಂಡು ಓದಿ ಹಿಂತಿರುಗಿಸುತ್ತಿದ್ದರಂತೆ. ಹೈಸ್ಕೂಲ್ ವಿದ್ಯಾಭ್ಯಾಸದಿಂದ ಮೊದಲುಗೊಂಡು ಅಂದುಕೊಂಡಂತೆ ವಿಜ್ಞಾನದಲ್ಲಿ ವ್ಯಾಸಂಗ ಮಾಡಲಿಕ್ಕಾಗದೆ ಕಲಾವಿಭಾಗದಲ್ಲೇ ಅಭ್ಯಾಸ ಮಾಡಿದ ದೇವೀರಪ್ಪನವರಿಗೆ ಆಗಿನ ಪರಿಸ್ಥಿತಿಯ ಒತ್ತಡವೇ ಮುಖ್ಯ ಕಾರಣವಾಗಿತ್ತು. ಅವರೇ ಹೇಳಿಕೊಳ್ಳುವಂತೆ "ಈ ಎಲ್ಲ ಕಾರಣಗಳಿಂದ ನಾನು ಆರ್ಟ್ಸ್‌ಗೆ ಬದಲಾಯಿಸಿದೆ. ಶಿವಮೊಗ್ಗಗೆ ಹೋಗಿ ಬರೀ ಆರ್ಟ್ಸ್ ಓದುವವರಾರು? ಎಂದುಕೊಂಡು ಬಂದಿದ್ದೆ, ಆಗ್ಗೆ ಎರಡು ವರ್ಷಗಳ ಹಿಂದೆ. ಈಗ ಪರಿಸ್ಥಿತಿಯ ಒತ್ತಡದಿಂದಾಗಿ ಆರ್ಟ್ಸ್‌ನ್ನೇ ಆರಿಸಿಕೊಂಡೆ. ನನಗೆ, ಬೇರೆಯವರು ಹೇಳಿದ್ದಂತೆ, ಯಾರ ಶಿಫಾರಸ್ಸೂ ಇಲ್ಲದೆ ವಿದ್ಯಾರ್ಥಿ ವೇತನ ದೊರೆಯಿತು. ಮುಂದಿನ ವರ್ಷದಲ್ಲಿಯೂ ವಿದ್ಯಾರ್ಥಿ ವೇತನ ದೊರಕಿತು"- ಎಂದಿದ್ದಾರೆ. ಹಾಗಾಗಿ ಇಂಟರ್ ಮೀಡಿಯೇಟ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕ ಮುಗ್ಗಟ್ಟು ಇಲ್ಲದಿದ್ದಲ್ಲಿ ಏನನ್ನಾದರೂ ಸಾಧಿಸಬಲ್ಲರು ಎಂಬುದಕ್ಕೆ ದೇವೀರಪ್ಪನವರು ಸಾಕ್ಷಿಯಾದರು.

3

**ಬಿ.ಎ ಸೋ ಅಥವಾ ಬಿ.ಎ. ಆನರ್ಸೋ :**

೧೯೩೩ನೇ ಇಸವಿ ಇಂಟರ್‌ಮೀಡಿಯೇಟ್‌ನಲ್ಲಿ ತೇರ್ಗಡೆಯಾಗಿದ್ದ ದೇವೀರಪ್ಪನವರು ಬಿ.ಎ ವ್ಯಾಸಂಗಕ್ಕೆ ಹೋಗಬೇಕೊ ಬಿಎ ಆನರ್ಸ್ ತೆಗೆದುಕೊಂಡು ಓದಬೇಕೊ ಎಂಬ ಆಲೋಚನೆಯಲ್ಲಿ ಮುಳುಗಿದರು. ಇಂಟರ್ ಮೀಡಿಯೇಟ್‌ನಲ್ಲಿ ಉತ್ತಮ ಅಂಕಗಳಿಸಿದ್ದರಿಂದ ಮುಂದಿನ ಓದಿನ ಬಗ್ಗೆ ಹೆಚ್ಚು ಆಸಕ್ತಿಯಿರಿಸಿಕೊಂಡಿದ್ದರು. ಬಿಎಗಿಂತ ಬಿಎ ಆನರ್ಸ್ ಓದುವುದೇ ಮೇಲು ಎಂಬ ದೃಢನಿರ್ಧಾರ ಕೈಗೊಂಡರು. ಬಿಎ ಓದಿ ಲಾ ಓದುವ ಆಸಕ್ತಿಯಿತ್ತು. ಆದರೆ ಲಾ ಓದಲು ಶಕ್ತಿಯಿರಲಿಲ್ಲ. ಪುಣೆಗೊ ಬೆಳಗಾವಿಗೊ ಹೋಗಿ ಕಲಿಯಬೇಕಿತ್ತು. ಬೆಳಗಾವಿಯಲ್ಲಿ ಲಾ ಕಾಲೇಜ್ ಇತ್ತೊ ಇಲ್ಲವೊ ಎಂಬ ಅನುಮಾನ ಬೇರೆ ಇತ್ತು. ಪುಣೆಗೆ ಹೋಗಿ ಬರುವ ಸಾಧ್ಯತೆಯಾದರೂ ಎಲ್ಲಿ ? ಎಂಬ ಬಗ್ಗೆ ಚಿಂತಿಸಿದರು. ಎಲ್ಲದಕ್ಕೂ ಬಡತನವೇ ಅಡ್ಡ ಸುಳಿಯುತ್ತಿತ್ತು. ಹಾಗಾಗಿ ಬಿಎ ಆನರ್ಸ್ ತೆಗೆದುಕೊಳ್ಳುವುದೇ ಸರಿ ಎಂದು ತೀರ್ಮಾನಿಸಿದರು. ಫಿಲಾಸಫಿ ಆನರ್ಸ್‌ಗೆ ಅರ್ಜಿ ಹಾಕಿದರು. ಅವರಿಗೆ ಕನ್ನಡ ಆನರ್ಸ್ ತೆಗೆದುಕೊಂಡರೆ ಬಿ.ಸಿ ಸ್ಕಾಲರ್‌ಶಿಪ್ ಮತ್ತು ಸಬ್ಜೆಕ್ಟ್ ಸ್ಕಾಲರ್‌ಶಿಪ್ ಎರಡೂ ಸಿಗುವ ಸಂಭವವಿತ್ತು. ಆಗಿನ ನಿಯಮಗಳು ಸಬ್ಜೆಕ್ಟ್ ಸ್ಕಾಲರ್‌ಶಿಪ್ ಜೊತೆಗೆ ಬಿ.ಸಿ ಸ್ಕಾಲರ್‌ಶಿಪ್ ತೆಗೆದುಕೊಳ್ಳುವುದನ್ನು ನಿಷಿದ್ಧಗೊಳಿಸಿರಲಿಲ್ಲ. ಹಾಗಾಗಿ ಕನ್ನಡ ಆನರ್ಸ್‌ನ್ನೇ ಆಯ್ಕೆ ಮಾಡಿಕೊಂಡರು.

ಮೈಸೂರಿನಲ್ಲಿ ಬಿಎ ಆನರ್ಸ್ ವ್ಯಾಸಂಗಕ್ಕೆ ಸೇರಿಕೊಂಡರು. ಆಗ ಅವರಿಗೆ ವಸತಿ ಸಮಸ್ಯೆ ಉಂಟಾಯಿತು. ಬೆಟ್ಟದಪುರದ ಹಾಸ್ಟೆಲಿಗೆ ಅರ್ಜಿ ಹಾಕಿ ಸೀಟಿಗೆ ಕಾದರು. ಇಲ್ಲಿಗೆ ಅರ್ಜಿ ಹಾಕುವ ಮೊದಲೇ ಹೊನ್ನಾಳಿಯ ಸ್ವಾಮಿಗಳಿಂದ ಬೆಟ್ಟದಪುರ ಸ್ವಾಮಿಗಳಿಗೆ ಬಹಳ ಕಷ್ಟಪಟ್ಟು ಪತ್ರ ತಂದಿದ್ದರು. ಆದರೆ ತಂದಿದ್ದ ಪತ್ರವನ್ನು ಬೆಟ್ಟದಪುರ ಸ್ವಾಮಿಗಳಿಗೆ ನೀಡಲಾಗಲಿಲ್ಲ. ಕಾರಣ ಸ್ವಾಮಿಗಳೂ ಹಾಸ್ಟೆಲ್ ಮೀಟಿಂಗ್‌ಗೆ ಬರುತ್ತಿರಲಿಲ್ಲ. ಹಾಸ್ಟೆಲ್‌ನ ಪ್ರಧಾನರಾಗಿದ್ದವರು ಭದ್ರಶೆಟ್ಟಿಯವರಾಗಿದ್ದರು. ಅವರನ್ನು ಕೇಳಿದಾಗ ಇವರ ಬಗ್ಗೆ ಅಷ್ಟೇನೂ ಗಮನ ಹರಿಸಲಿಲ್ಲ. ಅಲ್ಲಿಗೆ ಶ್ರೀಮಂತರ ಮಕ್ಕಳಿಬ್ಬರು ಬಂದಿದ್ದರು. ಅವರಿಗೆ ಕೂಡಲೇ ಸೀಟು ಸಿಕ್ಕಿತು. ಬಹಳ ದಿನಗಳ ಕಾಲ ಅಲೆದಾಡಿದ ದೇವೀರಪ್ಪನವರಿಗೆ ಬೇಸರ ಕೂಡ ಆಗಿತ್ತು. ಭದ್ರಶೆಟ್ಟರು "ಹೆ ! ಹೋಗ್ರಿ, ನೀವು ದಾವಣಗೆರೆ ಕಡೆಯವರು. ಶ್ರೀಮಂತರು" ಎಂದುಬಿಟ್ಟರು. ಆಗ ದೇವೀರಪ್ಪನವರಿಗೆ ಎಲ್ಲವೂ ಗೊತ್ತಾಯಿತು. ಇಲ್ಲಿ ಶ್ರೀಮಂತರಿಗೆ ಮಾತ್ರ ಸೀಟು ಸಿಕ್ಕುತ್ತದೆ,

ಬೇರೆಯುವವರಿಗೆ ಕಷ್ಟ ಎಂಬ ಅರಿವಾಯಿತು. ಯಾರಿಂದಲಾದರೂ ಹೇಳಿಸೋಣ ಎಂದರೆ ಅಂತಹ ಪ್ರಭಾವಿ ವ್ಯಕ್ತಿಗಳ ಪರಿಚಯ ಇರಲಿಲ್ಲ. ಆ ವೇಳೆಗೆ ಸುತ್ತೂರು ಹಾಸ್ಟೆಲ್ ಪ್ರಾರಂಭವಾಗಿದ್ದಿಲ್ಲದ ಕಾರಣ ವಸತಿ ಸಮಸ್ಯೆ ದೇವೀರಪ್ಪನವರಿಗೆ ಬಹಳಷ್ಟು ಸಂದಿಗ್ಧಕ್ಕೆ ಈಡುಮಾಡಿತು. ಕೊನೆಗೆ ಬೇರೆ ದಾರಿಯೇ ಇಲ್ಲದೆ ಮತ್ತೊಂದು ಕಡೆ ವಾಸ್ತವ್ಯಕ್ಕೆ ವ್ಯವಸ್ಥೆ ಮಾಡಿಕೊಂಡು ವ್ಯಾಸಂಗವನ್ನು ಮುಂದುವರೆಸಿದರು.

**ಗುರುಸ್ಮರಣೆ :**

ಏನೇ ಆಗಲಿ ಹೋಗಲಿ, ದೇವೀರಪ್ಪನವರಿಗೆ ಎದುರಾಗುತ್ತಿದ್ದ ಬಡತನ, ಹಣದ ಸಮಸ್ಯೆ ಇವೆಲ್ಲವುಗಳ ಮುಂದೆ ಬಿಎ ಆನರ್ಸ್‌ನ ಅಭ್ಯಾಸದ ಅವಧಿ ಮಾತ್ರ ಅತ್ಯದ್ಭುತವಾಗಿತ್ತು, ಆಕರ್ಷಕವಾಗಿತ್ತು, ಎಂದೆಂದಿಗೂ ಮರೆಯದಂತಹುದಾಗಿತ್ತು : ಇದಕ್ಕೆಲ್ಲಾ ಮುಖ್ಯ ಕಾರಣ ದೇವೀರಪ್ಪನವರ ಪಾಲಿಗೆ ದೊರೆತ ಕನ್ನಡದ ಅಂದಿನ ಶ್ರೇಷ್ಠಗುರುಗಳ ಸನ್ನಿದಿ ; ಮಹಾನ್ ಸಾಧಕರ, ವಿದ್ವಾಂಸರ, ಪಂಡಿತರ ಶಿಷ್ಯರಾಗಿ ಅವರ ಪಾಠ ಪ್ರವಚನಗಳನ್ನು ಕೇಳುವ ಸುಸಂದರ್ಭ ಲಭ್ಯವಾದದ್ದು. ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು, ಪ್ರೊ.ಬಿ.ಎಂ. ಶ್ರೀಕಂಠಯ್ಯನವರು, ಪ್ರೊ. ತೀ. ನಂ. ಶ್ರೀಕಂಠಯ್ಯನವರು, ಪ್ರೊ. ಡಿ.ಎಲ್. ನರಸಿಂಹಾಚಾರ್ಯರು, ಪ್ರೊ. ವಿ. ಸೀತಾರಾಮಯ್ಯನವರು, ಶ್ರೀ ಎಂ. ಆರ್. ವರದಾಚಾರ್ಯರು ಮುಂತಾದ ಮಹನೀಯರು ತಮಗೆ ಗುರುಗಳಾಗಿ ದೊರೆತದ್ದನ್ನು ದೇವೀರಪ್ಪನವರು ಅತ್ಯಂತ ವಿನಯದಿಂದ ಸ್ಮರಿಸಿಕೊಳ್ಳುತ್ತಿದ್ದರು. ಇಂತಹವರನ್ನು ಗುರುಗಳನ್ನಾಗಿ ಪಡೆದದ್ದಕ್ಕೆ ಬದುಕು ಸಾರ್ಥಕವಾಯಿತು ಎಂಬ ಅಭಿಲಾಷೆಯನ್ನು ಸದಾಕಾಲ ವ್ಯಕ್ತಗೊಳಿಸುತ್ತಲೇ ಇದ್ದರು. ಪ್ರತಿಯೊಬ್ಬರನ್ನೂ ಗೌರವ ಭಾವನೆಯಿಂದ ಆರಾಧಿಸುತ್ತಾ ಅವರಿಂದ ಕಲಿತುಕೊಂಡ, ಸ್ವೀಕರಿಸಿದ ಸಂಶೋಧನಾ ಸಂಪತ್ತನ್ನು ಕೊನೆಯಗಾಲದ ವರೆಗೂ ಮೈಗೂಡಿಸಿಕೊಂಡೇ ಮುನ್ನಡೆದರು.

ದೇವೀರಪ್ಪನವರು ತಮ್ಮ ವಿದ್ಯಾಗುರುಗಳ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ: "ಆಗ ನನಗೆ ಉಪಾಧ್ಯಾಯರಾಗಿದ್ದವರು ಪ್ರೊ. ವಿ. ಸೀತಾರಾಮಯ್ಯನವರೂ, ಕೆ. ವೆಂಕಟರಾಮಪ್ಪ, ಪ್ರಣತಾರ್ಥಿ ಹರನ್, ಎ. ಆರ್. ಕೃಷ್ಣಶಾಸ್ತ್ರಿಗಳು (ಆಗಿನ ವಿದ್ಯಾರ್ಥಿಗಳಿಗೆ ಪಾಠ ಹೇಳುವುದಕ್ಕೆಂದು ಸೆಂಟ್ರಲ್ ಕಾಲೇಜಿನಿಂದ ಬರುತ್ತಿದ್ದರು), ತಿರುಮಲೆ (ಲಾಜಿಕ್ ತಿರುಮಲೆ), ಅಗ್ರಿಕೋಲಾ ಬಿಎಂಎಸ್ (ಆರ್ಟ್ಸ್ ವಿದ್ಯಾರ್ಥಿಗಳಿಗೆ ನಾಟಕ ಹೇಳುವುದಕ್ಕೆ

ಬರುತ್ತಿದ್ದರು) ಇವರೇ ನೆನಪಿನಲ್ಲಿ ಉಳಿದಿರುವುದು. ಇಂಗ್ಲಿಷ್‌ಗೆ ಮಂಜುನಾಥ ಎಂಬುವವರು. ಶೇಷಯ್ಯಂಗಾರ್ ಎಂಬುವವರು ಸೂಪರಿಂಟೆಂಡೆಂಟ್.

ಪ್ರೊ.ವಿ. ಸೀತಾರಾಮಯ್ಯನವರು 'ಕಾದಂಬರೀ ಸಂಗ್ರಹ' ಹೇಳುತ್ತಿದ್ದರೆ ಮೈಮರೆತು ಕೇಳುತ್ತಿದ್ದೆ. ಅವರು ಕನ್ನಡವನ್ನಷ್ಟೇ ಅಲ್ಲ, ಸಂಸ್ಕೃತಿಯ ತಿರುಳನ್ನೇ ಕುಡಿಸುತ್ತಿದ್ದರು. ಬಿಎಂಶ್ರೀ, ಕೆ. ವೆಂಕಟರಾಮಪ್ಪನವರು ಹಾಸ್ಯಪ್ರಿಯ ರಾಗಿರುತ್ತಿದ್ದುದರಿಂದ ತರಗತಿಗಳಲ್ಲಿ ಲವಲವಿಕೆ ಇರುತ್ತಿದ್ದಿತು. ಕೃಷ್ಣ ಶಾಸ್ತ್ರಿಗಳು 'ನಾಗರಿಕ' ಪಾಠ ಮಾಡುತ್ತಿದ್ದುದರಿಂದ ತುಂಬ ಹಿತವಾಗಿರುತ್ತಿದ್ದಿತು. ಸಣ್ಣ ಸಣ್ಣ ವಿಷಯವನ್ನು ಬಿಡಿಸಿ ಹೇಳುತ್ತಿದ್ದರು. ಪ್ರಣತಾರ್ಥಿ ಹರನ್ ಚರಿತ್ರೆಯನ್ನೇ ಹೇಳಲಿ ಅರ್ಥಶಾಸ್ತ್ರವನ್ನೇ ಹೇಳಲಿ ಬಹುಸ್ವಾರಸ್ಯವಾಗಿರುತ್ತಿತ್ತು. ಅವರ ಪಾಠ ಸಾಹಿತ್ಯಕ್ಕಿಂತ ರುಚಿಕರವಾಗಿರುತ್ತಿದ್ದಿತು. ಎಂವಿ ಕೃಷ್ಣರಾವ್ ಅವರ ವಾಗಾಡಂಬರಕ್ಕೆ ನಾವು ಬೆರಗಾಗುತ್ತಿದ್ದೆವು. ಆದರೆ ಅವರು ಹೇಳುವುದು ಅರ್ಥವಾಗುತ್ತಿರಲಿಲ್ಲ. ಆದ್ದರಿಂದ ಆ ಸಂಬಂಧದ ಪಾಠಗಳಿಗೆ ನಾವು ನೋಟ್ಸ್‌ಗಳನ್ನು ಓದಿಕೊಳ್ಳುತ್ತಿದ್ದೆವು.

**ಬಿ.ಎಂ.ಶ್ರೀಯವರು ಮಾಡಿದ 12th night ಪಾಠ :**

ಬಿಎಂಶ್ರೀ ಅವರು ತರಗತಿಗೆ ಬಂದರೆ ಜೇನಿನ ಮಳೆ, ಜೇನಿನ ಹೊಳೆ. ಅವರು ಪರೀಕ್ಷೆ ಸಮೀಪಿಸುತ್ತಿದ್ದಾಗ ಬಂದ ಭಾನುವಾರ ಎಲ್ಲಾ ವಿದ್ಯಾರ್ಥಿಗಳಿಗೂ ಸ್ಪೆಷಲ್‌ಕ್ಲಾಸ್‌ಗೆ ಬರಬೇಕೆಂದು ಕರೆಕೊಟ್ಟರು. ಭಾನುವಾರ ಬೆಳಿಗ್ಗೆ ಹತ್ತು ಘಂಟೆಗೋ ಹನ್ನೊಂದು ಘಂಟೆಗೋ ಪಾಠ ಪ್ರಾರಂಭವಾಗಿತ್ತು. ಹನ್ನೆರಡನೆಯ ರಾತ್ರಿ (Twelth night) ಪಠ್ಯಪುಸ್ತಕ ಪ್ರಾರಂಭ ಮಾಡುವಾಗಲೇ ಹೇಳಿದರು. Twelth night revise ಮಾಡುತ್ತೇನೆಂದು. ಪಾಠ ಪ್ರಾರಂಭವಾದುದು ಹತ್ತು ಹನ್ನೊಂದು ಘಂಟೆಗೆ. ಮುಗಿದಾಗ ಸಂಜೆಯಾಗಿತ್ತು. ನಡುವೆ ಅರ್ಧತಾಸು ಬಿಡುವು. ಆಗ ನಾವು ಬಿಎಂಎಸ್‌ರವರ ನಿಜವಾದ ವ್ಯಕ್ತಿತ್ವ, ಶಕ್ತಿಸಾಮರ್ಥ್ಯ, ವಿದ್ಯಾರ್ಥಿ ಪ್ರೇಮ, ಕನ್ನಡ ಅಭಿಮಾನಗಳನ್ನು ಕಣ್ಣಾರೆ ಮೊದಲಬಾರಿಗೆ ಕಂಡೆವು. ಅವರ ಆ ಇಂಗ್ಲಿಷ್‌ನ್ನು ಓದಿದರೆ ಒಂದು ಚೆನ್ನು. ಆಗಾಗ ನಟಿಸುತ್ತಾ ಹೆಚ್ಚಾಗಿ ಮಲ್‌ಪೋಲಿಯೊ ಪಾತ್ರವನ್ನು ನಟಿಸುತ್ತ ಸಂಭಾಷಣೆಯನ್ನು ವಿವರಿಸುವಾಗ ಕನ್ನಡಕ್ಕೆ ಅದಾಗಲೇ ಅನುವಾದ ಮಾಡುತ್ತ ವಿವರಣೆ ನೀಡುತ್ತ ಮಾತುಗಳನ್ನು ಮೆಲುಕು ಹಾಕುತ್ತ ಸವಿಯುತ್ತಾ ಪಾಠ ಮಾಡಿದ್ದನ್ನು ಇಂದೂ ನಾನು ಮರೆಯಲಾರೆ. ಆಮೇಲೆ ಅವರ ಭಾಷಣ ಕೇಳಿದ್ದೇನೆ.

ಲೇಖನ ಓದಿದ್ದೇನೆ. ಆ ಮಾತುಬೇರೆ. ಆದರೆ ಅಂದು 12th night ಪಾಠ ಮಾಡಿದ್ದು ಮಾತ್ರ ಅತ್ಯದ್ಭುತವಾಗಿತ್ತು"

ಇದೆಲ್ಲವನ್ನು ದೇವೀರಪ್ಪನವರ ಮಾತುಗಳಲ್ಲಿ ಕೇಳುತ್ತಿದ್ದ ಹಾಗೆಯೇ ನಮಗೂ ಕೂಡ ಅಂತಹ ವಿದ್ವಾಂಸರ ಪಾಠ ಪ್ರವಚನಗಳು ಕಣ್ಣೆದುರೇ ಬಂದಂತೆ ಹಾದು ಹೋಗುತ್ತವೆ. ದೇವೀರಪ್ಪನವರು ಕನ್ನಡ ಆನರ್ಸ್ ತೆಗೆದು ಕೊಂಡಿದ್ದರಿಂದ ಬಹಳಷ್ಟು ಅನುಕೂಲವೇ ಆಯಿತು. ಎರಡು ಸ್ಕಾಲರ್‌ಷಿಪ್‌ಗಳು ದೊರೆತವು. ಎರಡನೆಯ ವರ್ಷ ಹಿಂದುಳಿದವರಿಗೆ ಕೊಡುವ ವಿದ್ಯಾರ್ಥಿ ವೇತನ ಸಿಕ್ಕಿತು. ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ದೇಶಬಂಧು ಎಂ ಬಸವಯ್ಯನವರಿಂದ ಸಾಕಷ್ಟು ಉಪಕಾರವಾಯಿತು ಎಂದು ಕೊನೆಯವರೆಗೂ ನೆನಪಿಸಿಕೊಳ್ಳುತ್ತಿದ್ದರು. ಈ ವರ್ಷ ಬಿಎ ಆನರ್ಸ್ ಪ್ರಿಲಿಮಿನರಿ ಪರೀಕ್ಷೆಯಲ್ಲಿ ಇಂಗ್ಲಿಷ್‌ನಲ್ಲಿ ಫೇಲ್ ಆಗಿದ್ದಕ್ಕೆ ಕೆಲವುಕಾರಣಗಳು ಅಂದರೆ ವೈಯಕ್ತಿಕವಾಗಿ ಇವರನ್ನು ಸಂದಿಗ್ಧಕ್ಕೆ ಒಳಗುಮಾಡಿದ್ದವು. ಅವರೇ ಹೇಳಿಕೊಳ್ಳುವಂತೆ ಹಾಸ್ಟೆಲ್‌ಗೆ ಸೇರಿದ್ದರೆ ಅಂತಹ ಸನ್ನಿವೇಶಗಳು ಒದಗುತ್ತಿರಲಿಲ್ಲವಂತೆ. ಮೂರನೆಯ ಆನರ್ಸ್ ಪರೀಕ್ಷೆಗೆ ಕುಳಿತುಕೊಂಡಾಗ ಇಂಗ್ಲೀಷ್ ಹೊರತುಪಡಿಸಿ ಎಲ್ಲಾ ವಿಷಯಗಳಲ್ಲಿಯೂ ಉತ್ತೀರ್ಣರಾಗಿದ್ದರು. ಆನರ್ಸ್ ರಿಸಲ್ಟ್ ತಡೆ ಹಿಡಿಯಲಾಯಿತು. ಈ ಸಂದರ್ಭದಲ್ಲಿ ೧೯೩೮-೩೯ ರಲ್ಲಿ ಪ್ರೊ ಟಿ.ಎಸ್. ವೆಂಕಣ್ಣಯ್ಯನವರು ಸ್ವರ್ಗಸ್ಥರಾದ ಬಗ್ಗೆ ತಿಳಿಸುತ್ತಾ ಅವರು ಪ್ರಾರಂಭಿಸಿದ್ದ ಪಾಠಗಳನ್ನು ಡಿಎಲ್‌ಎನ್, ಟಿಎನ್‌ಎಸ್ ರವರು ಮಾಡಿ ಮುಗಿಸಿದರು ಎಂದು ಹೇಳಿಕೊಂಡಿದ್ದಾರೆ. ಅದಾದ ಮುಂದಿನ ವರ್ಷ ಅಂದರೆ ೧೯೩೯-೪೦ ರಲ್ಲಿ ಬೆಂಗಳೂರಿಗೆ ಹೋಗಿ ಇಂಗ್ಲೀಷ್ ಒಂದನ್ನೇ ವ್ಯಾಸಂಗ ಮಾಡಿ ಪರೀಕ್ಷೆಗೆ ಹಾಜರಾದರು. ರಿಸಲ್ಟ್ ಬಂದಿತು. ಇಂಗ್ಲೀಷ್‌ನಲ್ಲಿ ತೇರ್ಗಡೆಯಾದರು. ಬಿಎ ಆನರ್ಸ್‌ನ್ನು ಫಸ್ಟ್ ಕ್ಲಾಸ್‌ನಲ್ಲಿ ತೇರ್ಗಡೆಯಾದ ಸಂಭ್ರಮ ಅವರಿಗೆ ಅತ್ಯಂತ ಆನಂದವನ್ನುಂಟುಮಾಡಿತು. ಟಿಎಸ್‌ವಿ., ಟಿಎನ್‌ಎಸ್, ಡಿಎಲ್‌ಎನ್ ಹಾಗೂ ಎಂ.ಆರ್ ವರದಾಚಾರ್ಯರಂಥ ಗುರುಗಳ ಸನ್ನಿಧಿಯಲ್ಲಿ ಪಾಠ ಪ್ರವಚನಗಳನ್ನು ಕೇಳಿದ್ದರ ಪರಿಣಾಮ ದೇವೀರಪ್ಪನವರ ಮನಸ್ಸು ಉಲ್ಲಾಸಭರಿತಗೊಂಡು ಸಂಭ್ರಮಿಸುತ್ತಿತ್ತು.

ದೇವೀರಪ್ಪನವರು ಕನ್ನಡ ಆನರ್ಸ್ ವಿಚಾರದಲ್ಲಿ ಕೆಲವು ಸಂಗತಿಗಳನ್ನು ಹೀಗೆ ಹೇಳಿಕೊಂಡಿದ್ದಾರೆ : "ಆಗ ಕನ್ನಡ ಆನರ್ಸ್‌ಗೆ ವಿದ್ಯಾರ್ಥಿಗಳು ಬರುತ್ತಲೇ ಇರಲಿಲ್ಲ. ನಾನು ಸೇರಿದ ವರ್ಷ (೧೯೩೬-೩೭) ಎಂ.ಎ.

ಯಲ್ಲಿ ಎಚ್.ಎಂ. ಶಂಕರನಾರಾಯಣರಾವ್, ಜಿ. ವೆಂಕಟಸುಬ್ಬಯ್ಯ ಅವರು. ಒಂದು ಕಡೆ ಎಸ್.ವಿ. ಪರಮೇಶ್ವರ ಭಟ್ಟರು. ನಾವು ಇದ್ದಂತಹ ಕ್ಲಾಸಿನಲ್ಲಿ ಒಟ್ಟು ಮೂರು ಜನ. ಆಗ ಬಿಎಂಶ್ರೀಯವರು ಬೆಂಗಳೂರಿನಿಂದ ಮೈಸೂರಿಗೆ ಒಂದು ಕನ್ನಡ ಸಾಹಿತ್ಯ ಚರಿತ್ರೆ, ಭಾಷಾ ಚರಿತ್ರೆಗಳನ್ನು ಒಂದುವಾರ (ಸುಮಾರು) ಹೇಳಿಕೊಡುತ್ತಿದ್ದರು." ಇವರೇ ಗುರುಗಳ ಬಗ್ಗೆ ಹೇಳಿಕೊಳ್ಳುವಂತೆ "ಎಲ್ಲ ಗುರುಗಳೂ ಯೋಗ್ಯರು, ದಕ್ಷರು, ವಿದ್ವಾಂಸರು. ಬಿಎಂಶ್ರೀ ಅವರ ಪಾಠದಲ್ಲಿ ಒಂದು ಬಗೆಯ ನಾವೀನ್ಯ, ಹೊಸಬೆಳಕು ಇರುತ್ತಿತ್ತು. ಟಿಎನ್ಎಸ್, ಡಿಎಲ್ಎನ್‌ರವರ ಪಾಠಗಳು ಬುದ್ಧಿಪ್ರಧಾನ. ಬಿಎಂಶ್ರೀ ಅವರು ಅಲ್ಲಿ ಪ್ರಬೋಧನೆ, ಸ್ಫೂರ್ತಿ ಆಗಿದ್ದರು." ಎಂದಿದ್ದಾರೆ. ಬಿಎ ಆನರ್ಸ್ ವ್ಯಾಸಂಗ ಮಾಡುತ್ತಿದ್ದ ಅವಧಿಯಲ್ಲಿ ತಮಗೆ ದೊರೆತಿದ್ದಂತಹ ಗುರುಗಳ ಬಗ್ಗೆ ದೇವೀರಪ್ಪನವರು ತುಂಬು ಗೌರವದಿಂದ ಹೇಳಿಕೊಂಡಿದ್ದಾರೆ.

ದೇವೀರಪ್ಪನವರಿಗೆ ಅದಾಗಲೇ ೨೭ ವರ್ಷ. ಮನೆಯಲ್ಲಿ ಇವರಿಗೆ ಮದುವೆ ಮಾಡಬೇಕೆಂಬ ಮಾತುಕತೆ ನಡೆದಿತ್ತು. ಬಿಎ ಆನರ್ಸ್ ಅನ್ನು ಫಸ್ಟ್ ಕ್ಲಾಸ್‌ನಲ್ಲಿ ತೇರ್ಗಡೆಯಾಗಿದ್ದಕ್ಕೆ ಮನೆಯಲ್ಲಿ ತುಂಬಾ ಸಡಗರ ಉಕ್ಕಿ ಹರಿದಿತ್ತು. ಈ ಮನೆತನದ ಮೊದಲನೆಯ ಅಕ್ಷರಸ್ಥ ಎಂಬ ಖ್ಯಾತಿಗೆ ಭಾಜನರಾಗಿದ್ದ ದೇವೀರಪ್ಪನವರನ್ನು ಕಂಡ ಅನೇಕರು ಊರಿನ ಕೀರ್ತಿಯನ್ನು ಎತ್ತಿಹಿಡಿದಿದ್ದಕ್ಕೆ ಸಂಭ್ರಮದಿಂದ ಕುಣಿದಾಡಿದ್ದರು. ಇದೊಂದು ವಿಶೇಷವೆಂದೇ ತಿಳಿದಿದ್ದ ಎಲ್ಲರೂ ದೇವೀರಪ್ಪನವರನ್ನು ತುಂಬು ಹೃದಯದಿಂದ ಅಭಿನಂದಿಸಿದ್ದರಂತೆ.

### ನೌಕರಿಗೆ ಸೇರಿದ್ದು :

ಈ ಸಂದರ್ಭದಲ್ಲಿ ದೇವೀರಪ್ಪನವರಿಗೆ ಮತ್ತೊಂದು ಸಿಹಿಸುದ್ದಿ ಬಂದೇ ಬಿಟ್ಟಿತು. ಫಸ್ಟ್‌ಕ್ಲಾಸ್‌ನಲ್ಲಿ ತೇರ್ಗಡೆ ಹೊಂದಿದ್ದ ಸುದ್ದಿಯಿಂದಾಗಿ ಮೈಸೂರು ಓರಿಯಂಟಲ್ ಲೈಬ್ರರಿಯ ಕ್ಯೂರೇಟರ್ ಆಗಿದ್ದ ಎಂ.ಎಸ್. ಬಸವಲಿಂಗಯ್ಯನವರು ದೇವೀರಪ್ಪನವರಿಗೆ ತಾರು (ಟೆಲಿಗ್ರಾಂ)ಕೊಟ್ಟು ಮೈಸೂರಿಗೆ ಕರೆಸಿಕೊಂಡು, ಇವರಿಂದ ಅಪೇಕ್ಷಾ ಪತ್ರ ಬರೆಸಿಕೊಂಡು, ಎನ್.ಎಸ್. ಸುಬ್ಬರಾಯರಲ್ಲಿಗೆ ತಾವೇ ಮುದ್ದಾಂ ಫೈಲ್ ತೆಗೆದುಕೊಂಡು ಹೋಗಿ, ಅವರ ಒಪ್ಪಿಗೆ ಪಡೆದುಕೊಂಡು, ೩-೬-೧೯೪೦ರಲ್ಲಿ ಗ್ರ್ಯಾಜುಯೇಟ್ ಕನ್ನಡ ಸ್ಪೆಷಲಿಸ್ಟ್ ಆಗಿ ನೇಮಕ ಮಾಡಿಕೊಂಡರು. ಅಂತೂ ಬದುಕಿಗೊಂದು

ಸೇವಾಭದ್ರತೆ ದೊರಕಿದಾಗ ದೇವೀರಪ್ಪನವರು ನೆಮ್ಮದಿಯ ನಿಟ್ಟುಸಿರು ಬಿಟ್ಟರು. ತಮ್ಮ ಬಾಲ್ಯದಿಂದ ಈವರೆಗಿನ ಓದಿನ ಸಂದರ್ಭದಲ್ಲಿ ಅನುಭವಿಸಿದ ಆರ್ಥಿಕ ಮುಗ್ಗಟ್ಟು, ಬಡತನ ಇತ್ಯಾದಿಗಳಿಗೆ ಇಂದು ಮುಕ್ತಿ ದೊರಕಿತಲ್ಲಾ ಎಂದು ಸಂತಸಪಟ್ಟುಕೊಂಡರು.

## ರುದ್ರಮ್ಮನವರೊಡನೆ ಮದುವೆ :



ಪತ್ನಿ ರುದ್ರಮ್ಮನವರೊಡನೆ

೧೯೪೩ ನೇ ಇಸವಿ ಜೂನ್-ಜುಲೈ ತಿಂಗಳು. ದೇವೀರಪ್ಪನವರ ಬಾಳಿನಲ್ಲಿನ ಮಹತ್ವದ ದಿನಗಳೆಂದೇ ಹೇಳಬೇಕು. ಇವರು ಬಾಳ ಸಂಗಾತಿಯನ್ನು ಸ್ವೀಕರಿಸಿದ್ದು ಈ ಅವಧಿಯಲ್ಲೇ. ಮೈಸೂರಿನಲ್ಲಿ ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟ್‌ನಲ್ಲಿ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಆಗಿದ್ದ ಬಿ. ಬಸವಪ್ಪನವರು ದೇವೀರಪ್ಪನವರ ಬಗ್ಗೆ ಚೆನ್ನಾಗಿ ತಿಳಿದುಕೊಂಡಿದ್ದರು. ಉತ್ತಮ ವ್ಯಕ್ತಿತ್ವದ ಸೌಮ್ಯ ಗುಣಸ್ವಭಾವದ, ಬುದ್ಧಿವಂತರೂ ಆಗಿದ್ದ ದೇವೀರಪ್ಪನವರನ್ನು ಹತ್ತಿರಕ್ಕೆ ಕರೆಸಿಕೊಂಡು ಮದುವೆಯ ಪ್ರಸ್ತಾಪವನ್ನು ಮುಂದಿಟ್ಟರು. ಮನೆಯವರೆಲ್ಲರ ಒಪ್ಪಿಗೆ ಪಡೆದುಕೊಂಡ ದೇವೀರಪ್ಪನವರು ಬಸವಪ್ಪ ಮತ್ತು ಬೀರೂರಿನ ಮಂಗಳಮ್ಮ ದಂಪತಿಗಳ ಮಗಳಾದ ರುದ್ರಮ್ಮನವರನ್ನು ವಿವಾಹವಾಗಲು ಒಪ್ಪಿಗೆ ಸೂಚಿಸಿದರು. ೧೯೪೩ ರ ಜೂನ್-ಜುಲೈ ತಿಂಗಳಲ್ಲಿ ಇಬ್ಬರ ಮದುವೆ ಹಿರಿಯರ ಸಮ್ಮುಖದಲ್ಲಿ ನಡೆಯಿತು. ದೇವೀರಪ್ಪ- ರುದ್ರಮ್ಮ, ಸತಿಪತಿಗಳಾಗಿ ಹೊಸಬದುಕಿಗೆ ಕಾಲಿಟ್ಟರು.

## ಎಚ್. ದೇವೀರಪ್ಪನವರ ವಂಶಾವಳಿ



## ಮಕ್ಕಳು, ಸಂಸಾರ :



ಶ್ರೀ ದೇವೀರಪ್ಪನವರ ಕುಟುಂಬ ವರ್ಗ

ದೇವೀರಪ್ಪನವರ ಸಾಂಸಾರಿಕ ಬದುಕು ಮೈಸೂರಿನಲ್ಲಿ ಪ್ರಾರಂಭ ವಾಯಿತು. ಇವರಿಗೆ ನಾಲ್ಕು ಜನ ಮಕ್ಕಳು ಜನಿಸಿದರು. ಮೂರು ಹೆಣ್ಣು ಮತ್ತು ಒಂದು ಗಂಡು. ಗೀತಾ, ಶಾಂತಾ, ಗೌರು ಮತ್ತು ಶ್ರೀ ನಾಗೇಶ ಇವರೇ ಆ ನಾಲ್ಕು ಜನ. ಈ ನಾಲ್ಕು ಜನರೂ ಪದವೀಧರರಾಗಿದ್ದಾರೆ. ಶ್ರೀಮತಿ ಗೀತಾ ಅವರು ಇಂಗ್ಲೀಷ್ ಎಂಎ ವಹಾಡಿ ಉಪನ್ಯಾಸಕರಾಗಿ ಸ.ಪ.ಪೂ. ಕಾಲೇಜು, ಕೋಟೆ ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸಿ ನಿವೃತ್ತರಾಗಿದ್ದಾರೆ. ಶ್ರೀಮತಿ ಶಾಂತಾ ಹಿಂದಿ ಎಂಎ ಪದವೀಧರರಾಗಿದ್ದಾರೆ. ಸ.ಪ.ಪೂ ಕಾಲೇಜು ದೊಡ್ಡ ಬಳ್ಳಾಪುರ ಇಲ್ಲಿ ಪ್ರಾಂಶುಪಾಲರಾಗಿ ಕೆಲಸ ಮಾಡಿ ನಂತರ ವೃತ್ತಿ ಶಿಕ್ಷಣ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸಿ ನಿವೃತ್ತರಾಗಿದ್ದಾರೆ. ಹಿಂದಿಯಿಂದ ಪ್ರೇಮಚಂದ್ರರ 'ಕಾದಂಬರಿ'ಯನ್ನು (ಆರು ನೂರು ಪುಟಗಳು) ಕನ್ನಡದಲ್ಲಿ 'ಕಾದಂಬರಿ' ಯಾಗಿಯೇ ಅನುವಾದಿಸಿ ಪ್ರಕಟಸಿದ್ದಾರೆ. ಶ್ರೀಮತಿ ಗೌರು ಕಾರ್ಪೋರೇಷನ್ ಬ್ಯಾಂಕಿನಲ್ಲಿ ಕೆಲಸ ಮಾಡಿ ಸ್ವಯಂನಿವೃತ್ತಿ ಪಡೆದು ನಿವೃತ್ತ ಜೀವನ ನಡೆಸುತ್ತಿದ್ದಾರೆ. ಶ್ರೀನಾಗೇಶ್ ಬಿಇ ಪದವೀಧರರಾಗಿದ್ದು ಮೈಸೂರಿನಲ್ಲಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ಇಲ್ಲಿ ಎಕ್ಸಿಕ್ಯೂಟಿವ್ ಎಂಜಿನಿಯರ್ ಆಗಿ ಕರ್ತವ್ಯನಿರ್ವಹಿಸುತ್ತಿದ್ದಾರೆ. ದೇವೀರಪ್ಪನವರದು ಮಲ್ಲಿಗೇನಹಳ್ಳಿಯಲ್ಲಿ ತಮ್ಮ ಮನೆತನದ ಮೊದಲನೆಯ ಅಕ್ಷರಸ್ಥರಾಗಿದ್ದ ಕಾರಣವೋ ಏನೋ ತಮ್ಮ ಮಕ್ಕಳೆಲ್ಲರನ್ನೂ ವಿದ್ಯಾವಂತರನ್ನಾಗಿ ಮಾಡಿದ್ದು ನಿಜಕ್ಕೂ ಹೆಮ್ಮೆಯ ಸಂಗತಿ.

**ಕಾರ್ಯ ಚಟುವಟಿಕೆ :**

೧೯೪೫ರಲ್ಲಿ ದೇವೀರಪ್ಪನವರು ಕೆಲಸಕ್ಕೆ ಸೇರಿಕೊಂಡಿದ್ದಾಗ ಬರುತ್ತಿದ್ದ ಸಂಬಳ ರೂ ೭೫ ಮಾತ್ರ. ಹೆಚ್ಚಿಲ್ಲ ಕಡಿಮೆಯಲ್ಲ ಎನ್ನುವಂತಿದ್ದರೂ ಆಗಿನ ಕಾಲಕ್ಕೆ ದೊರಕುತ್ತಿದ್ದ ಸಂಬಳದಲ್ಲಿ ಒಂದು ರೀತಿಯ ನೆಮ್ಮದಿಯಿತ್ತು. ಹಾಸಿಗೆಯಿದ್ದಷ್ಟು ಕಾಲು ಚಾಚು- ಎಂಬಂತೆ ಅವರ ಜೀವನ ಸಂತೃಪ್ತಿಯಿಂದ ಕೂಡಿತ್ತು. ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಕನ್ನಡ ಪದವೀಧರ ತಜ್ಞರಾಗಿ ಕೆಲಸಕ್ಕೆ ಸೇರಿಕೊಂಡ ದೇವೀರಪ್ಪನವರು ತದನಂತರದಲ್ಲಿ ಸಹಾಯಕ ನಿರ್ದೇಶಕರಾಗಿ, ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸಿದವರೂ. ಪ್ರಾರಂಭದಲ್ಲಿ ಕೆಲಸಕ್ಕೆ ಸೇರಿಕೊಂಡ ಹೊತ್ತಿನಲ್ಲಿ ಹಸ್ತಪ್ರತಿಗಳ ಸಂಗ್ರಹಣೆ, ಕ್ಯಾಟ್‌ಲಾಗ್ ತಯಾರಿಕೆ, ಸಂಪಾದನಾಕಾರ್ಯಗಳಲ್ಲಿ ಅತ್ಯಂತ ಆಸಕ್ತಿ, ಶ್ರದ್ಧೆ, ಪರಿಶ್ರಮವಹಿಸಿ ಅದರಲ್ಲಿ ತಮ್ಮನ್ನೇ ಸಂಪೂರ್ಣವಾಗಿ ತೊಡಗಿಸಿಕೊಂಡು ದುಡಿಯುತೊಡಗಿದರು. "ಸಿಂಗಿರಾಜ ಪುರಾಣವೆಂಬ ಬಸವರಾಜ ಚಾರಿತ್ರ್ಯವನ್ನು ಸಂಪಾದಿಸಬೇಕೆಂದು ಆಜ್ಞೆಯಾಗಿತ್ತು. ಸಂಪಾದನೆ ಯೆಂದರೇನೆಂಬುದು ಗೊತ್ತಿರಲಿಲ್ಲ. ಹೇಳಿ ಕೊಡುವವರೂ ಇರಲಿಲ್ಲ. ನನ್ನ ವಿದ್ಯಾಗುರುಗಳಾಗಿದ್ದವರನ್ನು ಹೋಗಿ ಕೇಳುವುದಕ್ಕಾಗುತ್ತಿರಲಿಲ್ಲ. ನನಗೆ ನಾನೇ ಮಾರ್ಗದರ್ಶನಕನಾಗಿದ್ದೆ." ಎಂದು ಹೇಳಿಕೊಂಡಿರುವ ದೇವೀರಪ್ಪನವರು ವಹಿಸಿಕೊಂಡ ಕೆಲಸದಲ್ಲಿ ಯಾವ ಅಳುಕೂ ತೋರದೆ ಸ್ವಂತ ಬುದ್ಧಿಶಕ್ತಿಯಿಂದಲೇ ಆ ಎಲ್ಲ ಕಾರ್ಯವನ್ನು ಪ್ರಾರಂಭ ಮಾಡಿಯೇ ಬಿಟ್ಟರು. ಅದರಲ್ಲಿ ಯಶಸ್ಸನ್ನೂ ಸಾಧಿಸಿದರು !

ದೇವೀರಪ್ಪನವರಿಗೆ ಕಛೇರಿಯ ಕೆಲಸ ಮಾಡುವುದೆಂದರೆ ಶ್ರದ್ಧಾಭಕ್ತಿಯಿಂದ ಕೂಡಿದ್ದುದಾಗಿತ್ತು. ಕರ್ತವ್ಯ ನಿರ್ವಹಣೆಯಲ್ಲಿ ತಮ್ಮದೇ ಆದ ವಿಧಿವಿಧಾನವನ್ನು ಅನುಸರಿಸಿಕೊಂಡು ಹೋಗುತ್ತಿದ್ದರು. ದಿನನಿತ್ಯವೂ ಸರಿಯಾದ ಸಮಯಕ್ಕೆ ಕಛೇರಿಗೆ ಬಂದು ಹೋಗುತ್ತಿದ್ದರು. ಪ್ರತಿಯೊಂದು ಹಂತದಲ್ಲಿಯೂ ಪರಿಶೀಲಿಸಿ, ಮಾರ್ಗದರ್ಶನ ಮಾಡಿ ಸಲಹೆ ಸೂಚನೆಗಳನ್ನು ಇತರರಿಗೆ ನೀಡುತ್ತಿದ್ದರು. ಯಾವುದೇ ಸಂದೇಹಗಳಿಗೆ ಕೂಡಲೇ ನಿವಾರಿಸುವ ಉಪಾಯ ಕಂಡುಕೊಂಡಿದ್ದರಲ್ಲದೆ, ಪ್ರೀತಿ ವಿಶ್ವಾಸಗಳಿಂದ ಕಛೇರಿ ಸಿಬ್ಬಂದಿಯನ್ನು ನೋಡಿಕೊಳ್ಳುತ್ತಿದ್ದರು. ಎಲ್ಲರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಲೇ ಕಛೇರಿ ಕೆಲಸದಲ್ಲಿ ಕಟ್ಟುನಿಟ್ಟಾಗಿರುವಂತೆ ಸೂಚಿಸುತ್ತಿದ್ದರು.

ಹಸ್ತಪ್ರತಿಗಳ ಸಂಗ್ರಹಣೆ ಕಾರ್ಯದಲ್ಲಿ ದೇವೀರಪ್ಪನವರು ಸಾಕಷ್ಟು ಕೆಲಸ ಮಾಡಿದ್ದಾರೆ. ಅನೇಕಕಡೆ ಪ್ರವಾಸಗಳನ್ನು ಮಾಡಿದ್ದಾರೆ. ಅವರ

ಜೊತೆ ಕೆಲಸ ಮಾಡಿದ್ದ ಅನೇಕ ಸಿಬ್ಬಂದಿಯವರು ಇಂದಿಗೂ ಸ್ಮರಿಸಿಕೊಳ್ಳುವುದುಂಟು. ಹಸ್ತಪ್ರತಿಗಳ ಸಂಗ್ರಹಣೆ, ಪರಿಶೀಲನೆಗಳಿಗಾಗಿ ನಾಡಿನೆಲ್ಲೆಡೆ ಸಂಚರಿಸುತ್ತಿದ್ದ ಸಂದರ್ಭದಲ್ಲಿ ಊಟೋಪಚಾರಗಳ ವೇಳೆಯನ್ನು ಹೊರತುಪಡಿಸಿ ನಿರಂತರವಾಗಿ ಸಿಬ್ಬಂದಿಯೊಡನೆ ಕೆಲಸ ಮಾಡುತ್ತಲೇ ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಬಿಡುವಿನ ವೇಳೆಯಲ್ಲಿ ಸಿಬ್ಬಂದಿಯವರನ್ನು ಪ್ರೇಕ್ಷಣೀಯ ಸ್ಥಳಗಳಿಗೆ ಕರೆದುಕೊಂಡು ಹೋಗಿ ಸಂತೋಷದಿಂದ ಕಾಲಕಳೆಯುತ್ತಿದ್ದರು. ಯಾರೊಂದಿಗೂ ಕಠಿಣವಾಗಿ ನಡೆದುಕೊಳ್ಳದೆ ಪ್ರೀತಿ ವಿಶ್ವಾಸಗಳಿಂದ ನೋಡಿಕೊಳ್ಳುತ್ತ ಎಲ್ಲರ ಮನಸ್ಸನ್ನು ಗೆಲ್ಲುತ್ತಿದ್ದರು. ಯಾವ ಕ್ಷಣದಲ್ಲಿಯೂ ಕೆಟ್ಟದ್ದನ್ನು ಬಯಸದೆ ಕಠಿಣ ಮಾತುಗಳನ್ನಾಡಿದರೂ ತಕ್ಷಣವೇ ಅವರನ್ನು ಒಲಿಸಿಕೊಂಡು ತಮ್ಮ ಕೆಲಸದ ಪ್ರಾಮಾಣಿಕತೆಯನ್ನು ಎತ್ತಿ ಹಿಡಿಯುವ ಹಾಗೆ ಮಾಡಿಬಿಡುವ ಸದ್ಗುಣ ಅವರಲ್ಲಿ ಎದ್ದುಕಾಣುತ್ತಿತ್ತು.

"೧೯೪೨ ನೆಯ ಇಸವಿ ಡಿಸೆಂಬರ್‌ನಲ್ಲಿ ಎಂದು ತೋರುತ್ತದೆ. ಕ್ಯೂರೇಟರ್ ಬಸವಲಿಂಗಯ್ಯನವರು ಲಿಂಗೈಕ್ಯರಾದರು. ಅವರ ಸ್ಥಾನಕ್ಕೆ ಎಚ್.ಆರ್. ರಂಗಸ್ವಾಮಿ ಅಯ್ಯಂಗಾರ್ಯರು ಅಧಿಕಾರಿಗಳಾಗಿ ಬಂದರು. ಅದೂ ಇನ್‌ಚಾರ್ಜ್ ಸೂಪರಿಂಟೆಂಡೆಂಟ್ ಆಗಿ. ನಾನು ೧೯೪೫ ರಲ್ಲಿ ಎಂಎ ಪರೀಕ್ಷೆಯಲ್ಲಿ ಉತ್ತೀರ್ಣನಾದೆ. ಆಗ Pupil teacher ಆಗಿ, ಒಂದು ವರ್ಷದ ಎಂಎ ಅನ್ನು ಎರಡು ವರ್ಷ ಓದಿ ಪರೀಕ್ಷೆ ಕೂಡಬಹುದಾಗಿತ್ತು. ನನಗೂ ಆ ಸೌಲಭ್ಯ ದೊರಕಿತು. ಆಗ ನನ್ನ ವಿದ್ಯಾಗುರುಗಳಾದ 'ಎಆರ್‌ಕೃ, ಡಿಎಲ್‌ಎನ್ ವಿ.ಸೀ. ಮತ್ತು ಡಾಕ್ಟರ್ ನರಸಿಂಹಯ್ಯನವರು ೧೯೪೫ರಲ್ಲಿ ಕನ್ನಡ ಎಂಎಗೆ ಕುಳಿತವರು ಒಬ್ಬರೇ. ಅದು ನನಗೆ High second class (56%) ಬಂದಿತ್ತು. ನನ್ನ ಯೋಗ್ಯತೆ ಅಷ್ಟೇ ಏನೊ ಎಂದುಕೊಂಡೆ. ನನಗೆ ಆಗ ಅನೇಕ ಸಾಂಸಾರಿಕ ತೊಂದರೆಗಳು ಇದ್ದುವು.

೧೯೪೭ ರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ರಿಸರ್ಚ್ ಫೆಲೊ ಆಗಿ ಸೇರಿದೆ. Fellowship ಗಾಗಿ ನನಗೂ ಶ್ರೀ ಜವರೇಗೌಡರಿಗೂ ಸ್ಪರ್ಧೆ. ಅದರಲ್ಲಿ ನಾನು ಆಯ್ಕೆಯಾದೆ. ಹಾಗೆಯೇ ಲೋ ಆರ್ ಸೆಕೆಂಡರಿ (M.S. examination-kannada) ಚೇರ್ಮನ್ ಆದೆ. ಈ ಸಂದರ್ಭದಲ್ಲಿ 'ಕುವೆಂಪು' ಅವರಿಗೆ ಹಿಡಿಸುವಂತಹ 'ಭಕ್ತಿತತ್ವ ಮತ್ತು ಕನ್ನಡ ಸಾಹಿತ್ಯದಲ್ಲಿ ಅದರ ಮೈದೋರಿಕೆ' ಎಂಬ ವಿಷಯ ಆರಿಸಿಕೊಂಡೆ. ಒಂದು ವರ್ಷ ಹತ್ತು ತಿಂಗಳು ಕೆಲಸ ಮಾಡಿದೆ. ಕುವೆಂಪು ಅವರ ನಿರ್ದೇಶನ

ಅತ್ಯದ್ಭುತವಾಗಿರುತ್ತಿತ್ತು. ಅಷ್ಟು ಹೊತ್ತಿಗೆ ನನ್ನನ್ನು Art curater ಆಗಿ ನೇಮಿಸಲಾಯಿತು. Fellowship ಕೆಲಸವನ್ನು ಬಿಟ್ಟು Art cruter ಕೆಲಸಕ್ಕೆ ಬಂದೆ. ಹಾಗೆ Fellowship ಬಿಡುವುದಕ್ಕೆ ಒಂದು ಕಾರಣವೂ ಇತ್ತು. ಆಗ pay revision ಮಾಡಿದ್ದರು. ಅಯ್ಯಂಗಾರ್ ಅವರು Art curater ಕೆಲಸ ಖಾಲಿ ಇದೆಯೆಂದು ಹೇಳಿ ಆ ಕೆಲಸದ ಸಂಬಳ ಹೆಚ್ಚಿಸಲು ಶಿಫಾರಸ್ಸು ಮಾಡಿರಲೇ ಇಲ್ಲ. ಅದನ್ನು ಸರಿಪಡಿಸಿಕೊಳ್ಳಲೆಂದು ಬಂದೆ. 150-10-200 ಇದ್ದುದ್ದು 150-10-250 ಆದರೂ ಆಗಬೇಕಿತ್ತು. ಎಷ್ಟೋ ಪ್ರಯತ್ನ ಮಾಡಿದೆ. ಸಾಧ್ಯವಾಗಲಿಲ್ಲ" ಹೀಗೆ ದೇವೀರಪ್ಪನವರ ವೃತ್ತಿ ಒಂದು ಕಡೆ ಸಾಗುತ್ತಿದ್ದರೆ ಮತ್ತೊಂದು ಕಡೆ ಅವರ ಸಾಹಿತ್ಯದ ಕೆಲಸ ನಿರಂತರವಾಗಿ ನಡೆಯುತ್ತಿತ್ತು.

ದೇವೀರಪ್ಪನವರು ಪ್ರಾರಂಭದಲ್ಲಿ ಕೃಷಿಗೈದದ್ದು ಸ್ವಂತ ರಚನೆಯ ಸಾಹಿತ್ಯ ಕ್ಷೇತ್ರದಲ್ಲಿ. ಅವರೇ ಹೇಳಿಕೊಳ್ಳುವಂತೆ ಸ್ವತಂತ್ರ ಅಥವಾ ಸೃಜನಾತ್ಮಕ. ೧೯೩೭ ರಲ್ಲಿ ಹೊರ ತಂದ ಸಣ್ಣಕಥೆಗಳ ಸಂಕಲನಗಳು 'ಸುವರ್ಣ ಸಂಪುಟ' ಹಾಗೂ 'ಹಳ್ಳಿಯ ಬದುಕು' ಕಾದಂಬರಿಗಳು. ಆಮೇಲೆ ಪ್ರಾಚ್ಯ ವಿದ್ಯಾಸಂಶೋಧನ ಸಂಸ್ಥೆಯಿಂದ ೧೯೫೦ ರಲ್ಲಿ 'ಸಿಂಗಿರಾಜ ಪುರಾಣ' (ವಾರ್ಧಕ ಷಟ್ಪದಿ ಕಾವ್ಯ) ಪ್ರಕಟವಾಯಿತು. ಇದಾದ ಎರಡು ಮೂರು ವರ್ಷದಲ್ಲಿ ಪ್ರಕಟವಾದ ಕೃತಿಯೆಂದರೆ 'ಬೆಳುವಲದ ಮಡಿಲಲ್ಲಿ' ಎಂಬ ಮಹತ್ವದ ಕಾದಂಬರಿ. ಈಗಾಗಲೆ ಈ ಕಾದಂಬರಿ. ಸಿನಿಮಾ ಆಗಿ ಕೂಡ ಒಳ್ಳೆಯ ಹೆಸರನ್ನು ಗಳಿಸಿಕೊಂಡಿದೆ. ದೇವೀರಪ್ಪನವರು ಹಳ್ಳಿಯ ಬದುಕನ್ನು ಹತ್ತಿರದಿಂದ ಕಂಡಿದ್ದರ ಹಿನ್ನೆಲೆಯಲ್ಲಿ ಗ್ರಾಮೀಣ ಬದುಕನ್ನು ಈ ಕೃತಿಯಲ್ಲಿ ಸೊಗಸಾಗಿ ಹಿಡಿದಿಟ್ಟಿದ್ದಾರೆ.

**ನಿರ್ದೇಶಕರಾಗಿ ಸಾಧನೆ :**

೧೯೫೪ ರಿಂದ ೧೯೬೭ರ ವರೆಗೆ ಪ್ರಾಚ್ಯ ವಿದ್ಯಾ ಸಂಶೋಧನಾ ಸಂಸ್ಥೆಯ ನಿರ್ದೇಶಕರಾಗಿ ಕೆಲಸ ಮಾಡಿದ ಅವಧಿಯಲ್ಲಿ ಇವರು ಮಾಡಿದ ಸಾಧನೆ ಅನನ್ಯವಾದುದು. ಪಥವೀಧರ ತಜ್ಞರಾಗಿ ಸಹಾಯಕ ನಿರ್ದೇಶಕರಾಗಿ ಸಮರ್ಥವಾಗಿ ಕೆಲಸ ನಿರ್ವಹಿಸಿದ ಹಿನ್ನೆಲೆಯಿದ್ದು ದೇವೀರಪ್ಪನವರಿಗೆ ಅದೇ ಸಂಸ್ಥೆಯ ನಿರ್ದೇಶಕರಾಗಿ ಕೆಲಸ ನಿರ್ವಹಿಸಲು ಅವಕಾಶ ದೊರೆತದ್ದರಿಂದ ಕನ್ನಡ ಹಸ್ತ ಪ್ರತಿ ಸಂಗ್ರಹಣೆ, ಕ್ಯಾಟಲಾಗ್ ತಯಾರಿಕೆ, ಸಂಶೋಧನಾ ಕೃತಿಗಳ ಸಂಪಾದನೆ, ಅಧ್ಯಯನ ಪ್ರಕಟಣೆ ವಿಭಾಗದಲ್ಲಿ



ಡಾ. ರಾಜೇಂದ್ರ ಪ್ರಸಾದ್ ಅವರು ಪ್ರಾಚ್ಯ ವಿದ್ಯಾಸಂಶೋಧನ ಸಂಸ್ಥೆಗೆ ಭೇಟಿ ಕೊಟ್ಟಾಗ ತೆಗೆದ ಚಿತ್ರ

ಮಹತ್ತರವಾದ ಕೆಲಸಗಳನ್ನು ಮಾಡಲು ಸಾಧ್ಯವಾಯಿತು. ಅವರೇ ಹೇಳಿಕೊಳ್ಳುವಂತೆ" ನಾನು ೧೯೫೪ ರಿಂದ ೧೯೬೭ ರವರೆಗೆ ಓರಿಯಂಟಲ್ ರಿಸರ್ಚ್ ಇನ್ಸಿಟ್ಯೂಟ್‌ನಲ್ಲಿ ಡೈರೆಕ್ಟರ್ ಆಗಿದ್ದೆ. ಆಗ ತುಂಬ ಚನ್ನಾಗಿ ಕೆಲಸ ಮಾಡಿದೆ. ಸುಮಾರು ಹತ್ತು ಸಾವಿರ ಕನ್ನಡ, ಸಂಸ್ಕೃತ ಹಸ್ತ ಪ್ರತಿಗಳನ್ನು ಪಂಡಿತರ ಸಹಾಯದಿಂದ ಸಂಗ್ರಹಿಸಿದೆ. ನಾನೇ ಖುದ್ದಾಗಿ ಹಸ್ತಪ್ರತಿಗಳ ಪರಿಶೀಲನೆಗೆ ಹೋಗುತ್ತಿದ್ದೆ. ಆದುದರಿಂದ ಅಷ್ಟು ಸಂಗ್ರಹ ಆಯಿತು. ನಾನು ಕೆಲಸಕ್ಕೆ ಸೇರಿದಾಗ ಓರಿಯಂಟಲ್ ಲೈಬ್ರರಿಯಲ್ಲಿ ಕೇವಲ ಒಂದೂವರೆ ಸಾವಿರ ಕನ್ನಡ ಹಸ್ತಪ್ರತಿಗಳಿದ್ದುವು. ನಾನು ನಿವೃತ್ತನಾಗುವ ವೇಳೆಗೆ ಆಗ ಸಂಖ್ಯೆ ೪೦೦೦ ಕ್ಕೆ ಏರಿತ್ತು. ಸಂಸ್ಕೃತ ಹಸ್ತ ಪ್ರತಿಗಳ ಸಂಖ್ಯೆ ಒಂಬತ್ತು ಸಾವಿರವೋ ಏನೋ. ನಾನು ನಿವೃತ್ತನಾಗುವ ಹೊತ್ತಿಗೆ ಸುಮಾರು ೧೩೦೦೦ ಹಸ್ತ ಪ್ರತಿಗಳಿದ್ದುವು.

ಹೊಸದಾಗಿ ಮೈಕ್ರೋಫಿಲಂ ವಿಭಾಗವನ್ನು ಕಟ್ಟಿಬೆಳೆಸಿದೆ. ಹತ್ತಿಪ್ಪತ್ತು ಸಂಸ್ಕೃತ ಗ್ರಂಥಗಳೂ ಅಷ್ಟೇ ಕನ್ನಡ ಗ್ರಂಥಗಳೂ ಬೆಳಕಿಗೆ ಬಂದುವು. ಮುಖ್ಯವಾದುವು ಸಂಸ್ಕೃತ : ಕೌಟಿಲ್ಯನ ಅರ್ಥಶಾಸ್ತ್ರ (ಪುನರ್ ಮುದ್ರಣ), ಶಿವತತ್ತ್ವ ರತ್ನಾಕರ, ನ್ಯಾಯ ಮಂಜಲಿ, ವಿಷ್ಣು ಸಹಸ್ರನಾಮ ಭಾಷ್ಯ, ಕ್ರಿಯಾಸಾರ (ಭಾಗ-೨ ಮತ್ತು ೩), ರಾಮಾಯಣ ಕಥಕ್‌ಟೀಕಾ, ತತ್ತ್ವ ಮುಕ್ತಾ ಕಲಾಪ, ಸೌಂದರ್ಯಲಹರಿ ಕನ್ನಡ ಟೀಕಾ, ಸೌಂದರ್ಯ ಲಹರಿ (ಸಂ) ಇತ್ಯಾದಿ. ಕನ್ನಡ : ಬಸವರಾಜ ಚಾರಿತ್ರ (ಸಿಂಗಿರಾಜ), ಶಿವತತ್ತ್ವ

ಚಿಂತಾಮಣಿ, ಪದಾರ್ಥಸಾರ, ರಾಮನಾಥ ಚರಿತೆ (ಭಾಗ ೨, ೩) ತೊರವೆ ರಾಮಾಯಣ, ಕಾವ್ಯಾವಲೋಕನ, ಲಾಸ್ಯರಂಜನ (With english translation and illustrations) ಇತ್ಯಾದಿ, ಇತ್ಯಾದಿ"

**ಸಂಸ್ಥೆ ಇಬ್ಭಾಗ, ಸಂಕಷ್ಟ :**

"೧೯೬೬ ರ ಆದಿಭಾಗದಲ್ಲಿಯೇ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಇಬ್ಭಾಗವಾಯಿತು. ಕನ್ನಡ ವಿಭಾಗ, ಸಂಸ್ಕೃತ ವಿಭಾಗ ಎಂದು. ಮೊದಲು ಪೂರ್ತಿ ಡೈರೆಕ್ಟರ್ ಆಗಿದ್ದವನು ಆಗ ೧/೨ ಡೈರೆಕ್ಟರ್ ಆದೆ. ಕನ್ನಡ ಅಧ್ಯಯನ ಸಂಸ್ಥೆಯ ಒಂದು ವಿಭಾಗದ ಸಂಪಾದನಾ ವಿಭಾಗಕ್ಕೆ ಡೈರೆಕ್ಟರ್ ಆದೆ. ಅಂತೂ ೧೨ ವರ್ಷ ಒಂದು ದೊಡ್ಡ ಸಂಸ್ಥೆ (ಅದು ದೊಡ್ಡದೇ)ಯ ಡೈರೆಕ್ಟರ್ ಆಗಿದ್ದವನು ೧/೨ ಡೈರೆಕ್ಟರ್ ಕನ್ನಡಕ್ಕೆ ಮಾತ್ರ" ಹೀಗೆ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಕನ್ನಡ ಮತ್ತು ಸಂಸ್ಕೃತ ಎಂಬೆರಡು ವಿಭಾಗವಾದ ಮೇಲೆ ಇವರು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನಾ ವಿಭಾಗಕ್ಕೆ ಮಾತ್ರ ಡೈರೆಕ್ಟರ್ ಆಗಿ ಕೆಲಸ ನಿರ್ವಹಿಸಿದರು. ಇವರು ೧೯೬೮ನೆಯ ಜೂನ್ ತಿಂಗಳಲ್ಲಿ ನಿವೃತ್ತರಾಗಬೇಕಿತ್ತು. ಆದರೆ ಅವರನ್ನು ಒಂದು ವರ್ಷಕಾಲ ಪುನರ್ ನೇಮಿಸಿಕೊಂಡು ಕೆಲಸ ನಿರ್ವಹಿಸಲು ಆದೇಶ ನೀಡಲಾಯಿತು. ಈ ಸಂದರ್ಭಕ್ಕೆ ದೇವೀರಪ್ಪನವರಿಗೆ ಬೀರೂರಿನಲ್ಲಿ ಒಂದು ಕಾಲೇಜು ಹೊಸದಾಗಿ ಪ್ರಾರಂಭವಾದ ವಿಚಾರ ತಿಳಿಯಿತು. ಅಲ್ಲಿಗೆ ಹೇಗೂ ಇರಲಿ ಎಂದು ಅರ್ಜಿ ಹಾಕಿದರು. ಬಿದ್ದು ಹೋಗೊ ಮಾತು ಎದ್ದು ಹೋಗಲಿ ಎಂದ ಹಾಗೆ, ನಾನೇ ಬಿಟ್ಟು ಹೋಗುವವನಂತೆ ಮಾನಸಗಂಗೋತ್ರಿಯನ್ನು ಬಿಟ್ಟೆ. ಮಾನಸಗಂಗೋತ್ರಿಯನ್ನು ಬಿಟ್ಟು ಬೀರೂರಿಗೆ ಪ್ರಯಾಣ ಬೆಳೆಸಿದೆ. ಬೀರೂರಿನಲ್ಲಿ ಆರೇಳು ತಿಂಗಳು ಕೆಲಸ ಮಾಡಿದರೂ ಯಾಕೋ ಅಲ್ಲಿರಲು ಅವರಿಗೆ ಮನಸ್ಸಾಗಲಿಲ್ಲ. "ಸ್ವತಂತ್ರ ಮನೋವೃತ್ತಿಯುಳ್ಳವರಿಗೆ ಅಂತಹ ಕಾಲೇಜುಗಳಲ್ಲಿ ಕೆಲಸ ಮಾಡುವುದಕ್ಕಾಗುವುದಿಲ್ಲ. Head Clerk ಆಗಿ ಯಾರು ಕೆಲಸ ಮಾಡಲೊಪ್ಪುತ್ತಾರೆ, ಸರ್ಕಾರದಲ್ಲಿ ಒಳ್ಳೆಯ ಕೆಲಸದಲ್ಲಿದ್ದವರು! ಬೀರೂರು, ಕಣ್ಣಲ್ಲಿ, ಮೂಗಲ್ಲಿ ನೀರೂರುವಂತಾಗಿತ್ತು, ನನಗೆ ದಮ್ಮು ಕಾಯಿಲೆ ಅಲ್ಲಿ ಜಾಸ್ತಿ ಆಗುತ್ತಿತ್ತು. ಆ ಊರನ್ನು ಬಿಟ್ಟು ಬೆಂಗಳೂರಿಗೆ ಬಂದುದು ಒಳ್ಳೆಯದಾಯಿತು" ದೇವೀರಪ್ಪನವರ ಕಡೆಯ ಕಾಲದ ಸೇವೆ ಅಷ್ಟೊಂದು ತೃಪ್ತಿಕರವಾಗಿರಲಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

**ಬೆಂಗಳೂರಿಗೆ ಬಂದದ್ದು :**

ದೇವೀರಪ್ಪನವರು ಬೆಂಗಳೂರಿಗೆ ಬಂದು ನೆಲೆಯೂರಿದ ಮೇಲೆ ಸ್ವಲ್ಪಮಟ್ಟಿಗೆ ನೆಮ್ಮದಿಯಿಂದ ಇದ್ದಿರುವಂತೆ ಹೇಳಿಕೊಂಡಿದ್ದಾರೆ. ಇವರು "ಮೈಸೂರಿನಲ್ಲಿದ್ದಾಗ ನನ್ನ ಆರೋಗ್ಯ ಸರಿಯಾಗಿರುತ್ತಿರಲಿಲ್ಲ. ಯಾವಾಗ ಬೇಕೆಂದರಾಗ ದಮ್ಮು ಬರುತ್ತಿತ್ತು. ಅಲ್ಲಿ ಒಂದು ಚಿಕ್ಕ ಮನೆಯಲ್ಲಿದ್ದೆ. ಸ್ವಂತ ಸಂಶೋಧನೆಗೆ ಅನೇಕ ಪ್ರತಿಬಂಧಕಗಳಿದ್ದುವು. ಮೈಸೂರಿನಲ್ಲಿ ನನ್ನ ಬಂಧುಗಳಾರು ಇರಲಿಲ್ಲ. ಬಹು ಚೆನ್ನಾಗಿ ಮನೆ ಕಟ್ಟಿಸಿಕೊಂಡಿದ್ದೇನೆ. ಸಂಶೋಧನಾ ಕಾರ್ಯವೂ ತಕ್ಕಮಟ್ಟಿಗೆ ಮುಂದುವರಿಯುತ್ತಿದೆ. ನನ್ನ ಬಂಧುಗಳೂ ಸ್ನೇಹಿತರೂ ಬೆಂಗಳೂರಿನಲ್ಲಿಯೇ ಹೆಚ್ಚಾಗಿದ್ದಾರೆ. ಈಗ ಸುಖವಾಗಿಯೇ ಇದ್ದೇನೆ. ಶ್ರೀಮಂತನಲ್ಲದಿದ್ದರೂ, ಭಗವಂತನೇ ನಾನು ಮೈಸೂರು ಬಿಡುವಂತೆ ಮಾಡಿ, ಮೈಸೂರಿನಿಂದ ಬೀರೂರಿಗೆ ಒಗೆದು ಅಲ್ಲಿಂದ ಬೆಂಗಳೂರಿಗೆ ತಂದಿರಬೇಕೆಂದು ನನಗನ್ನಿಸಿದೆ. ಆದುದರಿಂದ ಅವರಾರನ್ನೂ ನಾನು ದೂರುವುದಿಲ್ಲ. ಅವರೆಲ್ಲರಿಗೂ ತುಂಬ ಕೃತಜ್ಞನಾಗಿದ್ದೇನೆ" ಹೀಗೆ ತಮ್ಮ ಬದುಕಿನ ಪ್ರಮುಖ ಸಂಗತಿಗಳನ್ನು ಹೇಳಿಕೊಂಡಿರುವ ದೇವೀರಪ್ಪನವರ ನಡೆ-ನುಡಿ, ನೇರ, ಸ್ಪಷ್ಟ, ದಿಟ್ಟ ಹೆಜ್ಜೆಯನ್ನಿಟ್ಟಿರುವ ಕಡೆಗೆ ಎಂಬುದು ಗೊತ್ತಾಗುತ್ತದೆ. ತಮಗೇನೇ ಅಡೆತಡೆ, ತೊಂದರೆಗಳು ಎದುರಾಗಿದ್ದರೂ ಸಹ ಅವುಗಳೆಲ್ಲವನ್ನೂ ಮರೆತು ಸಂತೃಪ್ತಿಯಿಂದಿದ್ದೇನೆ ಎಂದು ಹೇಳಿಕೊಂಡಿರುವ ಮಾತು ಕಡೆಗಾಲದಲ್ಲಾದರೂ ಸ್ವತಂತ್ರವಾಗಿ ಬದುಕುವ ಸ್ವಾತಂತ್ರ್ಯ ಲಭಿಸಿತ್ತೆಂಬುದನ್ನು ತಿಳಿಯಪಡಿಸುತ್ತದೆ.

ದೇವೀರಪ್ಪನವರದು ಬಾಲ್ಯದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಹೋರಾಟದ ಬದುಕು. ಸ್ಕೂಲ್‌ಗೆ ಸೇರುವಾಗಲೂ ಅವರಿಗೆ ಕಾಡಿದ್ದು ಹಣದ ಸಮಸ್ಯೆ, ಬಡತನ ಚಿಂತೆ ವ್ಯಾಸಂಗದ ದಾರಿಯುದ್ದಕ್ಕೂ ಸವಾಲಾಗಿಯೇ ಬಂದ ಇವುಗಳನ್ನು ಎದುರಿಸುತ್ತಲೇ ಹೋದರು. ಜೊತೆಗೆ ಪ್ರತಿಭಟನೆಯ ಹೆಜ್ಜೆಯನ್ನಿಕ್ಕುತ್ತಾ ತನಗೆ ಸರಿಯೆನಿಸಿದ ರೀತಿಯಲ್ಲಿ ಬದುಕುತ್ತ ಬಂದರು. ನಿವೃತ್ತರಾದ ಮೇಲೆಯೂ ಹೆಚ್ಚು ಹೆಚ್ಚು ಸಂಶೋಧನ ಕಾರ್ಯ ಕೈಗೊಂಡು ಲೇಖನಗಳನ್ನು ಬರೆದರು. ಪ್ರತಿಯೊಂದು ಬರಹದಲ್ಲಿಯೂ ಸಂಶೋಧನೆಯ ಕಾರ್ಯದ ನಿಜ ಸ್ವರೂಪವನ್ನು ಎತ್ತಿ ಹಿಡಿದರು. ತಮಗೆ ದೊರಕಿದಂತಹ ವಿದ್ಯಾಗುರುಗಳ ಆಶೀರ್ವಾದವನ್ನು ಪರಿಪಾಲಿಸಿದರು. ತಮ್ಮ ಸುತ್ತಲೂ ಕೆಲಸ ಮಾಡುತ್ತಿದ್ದ ಸಿಬ್ಬಂದಿ, ವಿದ್ಯಾರ್ಥಿ, ವಿದ್ವಾಂಸರುಗಳ ಜೊತೆಗೆ ಆತ್ಮೀಯವಾಗಿ ನಡೆದುಕೊಳ್ಳುತ್ತಾ ತಮ್ಮದೇ ಮಾರ್ಗವನ್ನು ಅವರಲ್ಲಿ

ಕಾಣತೊಡಗಿದರು. ಗುರುವಿನಿಂದ ಪಡೆದದ್ದು ಸಾರ್ಥಕತೆ ಪಡೆಯಿತು. ದೇವೀರಪ್ಪನವರ ವ್ಯಕ್ತಿತ್ವ ಇದಕ್ಕೆಲ್ಲಾ ಕಾರಣವಾಯಿತೆಂದರೆ ಅತಿಶಯೋಕ್ತಿಯೆನಿಸುವುದಿಲ್ಲ.

**ಅನ್ಯಾಯದ ವಿರುದ್ಧ ಪ್ರತಿಭಟನೆ :**

ದೇವೀರಪ್ಪನವರು ಬಾಲ್ಯದಿಂದಲೂ ತಾವು ಆಲೋಚಿಸಿದಂತೆಯೇ ಬದುಕಬೇಕೆಂಬ ಛಲ ತೊಟ್ಟವರು. ಕಣ್ಣೆದುರು ಏನೇ ಅನ್ಯಾಯ ಕಂಡುಬಂದರೂ ತಕ್ಷಣವೇ ಅದಕ್ಕೆ ಹೋರಾಟದ ಮೂಲಕ ಪರಿಹಾರ ಕಂಡುಹಿಡಿಯುವ ಪ್ರಯತ್ನ ಮಾಡುತ್ತಿದ್ದರು : "ನಾನು ಊರಿನಲ್ಲಿದ್ದಾಗ ಏನೇ ಅನ್ಯಾಯ ನಡೆದರೂ ಪ್ರತಿಭಟಿಸುತ್ತಿದ್ದೆ. ಪ್ರೈಮರಿ ಸ್ಕೂಲಿಗೆ ಬೆಳಗುತ್ತಿಯ ಇಬ್ಬರು ಮಾಸ್ತರು ಬರುತ್ತಿದ್ದರು. (ಬೆಳಗುತ್ತಿಗೂ ನಮ್ಮೂರಿಗೂ ಮೂರು ಫರ್ಲಾಂಗ್ ದೂರ. ನಮ್ಮೂರಿಗೂ ತೀರ್ಥರಾಮೇಶ್ವರಕ್ಕೂ ಎರಡು ಮೈಲು ಅಷ್ಟೆ) ಅವರು ಪ್ರಭಾವಶಾಲಿಗಳಾಗಿದ್ದವರು. ಅರಸು ಮನೆತನದವರೆಂದು ಅವರಿಗೆ ತೇಂಕಾರ. ಊರಿನ ಜನ ಅವರೊಂದಿಗೆ ಸ್ನೇಹ ಬೆಳೆಸುವುದು ದೊಡ್ಡಸ್ತಿಕೆಯ ಕುರುಹೆಂದು ಭಾವಿಸುತ್ತಿದ್ದರು. ಜನರು ತಮಗೆ ಕೊಡುತ್ತಿದ್ದ ಗೌರವ ಮರ್ಯಾದೆಗಳನ್ನು ದುರುಪಯೋಗಪಡಿಸಿಕೊಂಡು ಶಾಲೆಗೆ ಸಕಾಲದಲ್ಲಿ ಬರುತ್ತಿರಲಿಲ್ಲ. ಒಬ್ಬರು ಒಂದು ದಿನ ಬಂದರೆ ಇನ್ನೊಬ್ಬರು ಇನ್ನೊಂದು ದಿನ. ಹೀಗಾಗಿ ನಮ್ಮೂರಿನ ಬಾಲಕರ ವಿದ್ಯಾಭ್ಯಾಸಕ್ಕೆ ತೊಂದರೆಯಾಗುತ್ತಿತ್ತು. ಆದ್ದರಿಂದ ನಾನೂ ನನ್ನ ಗೆಳೆಯರೂ ಸೇರಿ ಒಂದು ಅರ್ಜಿ ಬರೆದು ರೇಂಜ್ ಇನ್ಸ್‌ಪೆಕ್ಟರಿಗೂ ಜಿಲ್ಲಾ ವಿದ್ಯಾಧಿಕಾರಿಗಳಿಗೂ ಕಳಿಸಿದೆವು. ಊರಿನ ಜನರಿಂದ ರುಜು ಹಾಕಿಸಿದ್ದೆವು. ಅದಕ್ಕೆ ವಿದ್ಯಾಧಿಕಾರಿಗಳು ಆ ಮಾಸ್ತರುಗಳಿಂದ ಸಮಜಾಯಿಷಿ ಕೇಳಿದ್ದರೋ ಏನೋ, ಆ ಉಪಾಧ್ಯಾಯರು ಏನು ಮಾಡಿದರೊ ?

ಹಳ್ಳಿಯವರು ಬರೆದ ಹಾಗೆ ಮತ್ತೊಂದು ಅರ್ಜಿಯನ್ನು ಬರೆದರು. ಈ ಉಪಾಧ್ಯಾಯರು ಪರಮಶ್ರೇಷ್ಠರು. ಇವರಂತಹ ಮೇಷ್ಟರು ಈ ಗಡಿಭಾಗದಲ್ಲಿಯೇ ಇಲ್ಲ. ಇವರನ್ನು ವರ್ಗ ಮಾಡಕೂಡದು. ಇದೇ ಊರಿನಲ್ಲಿ ಇಟ್ಟುಕೊಡಬೇಕೆಂದು ಆ ಅರ್ಜಿಯಲ್ಲಿತ್ತು. ನಾವು ಮೊದಲು ಯಾರ್‍ಯಾರಿಂದ ರುಜು ಹಾಕಿಸಿದ್ದೆವೋ ಅವರಿಂದಲೇ ಇವರೂ ರುಜು ಹಾಕಿಸಿದರು. ಆ ಅರ್ಜಿಯೂ ಹೋಯಿತು.

ಮೊದಲಿನ ಅರ್ಜಿ ಬರೆದವರು ಯಾರು ? ಇವರಿಗೆ ಊಟನ

ಯಜಮಾನಿಕೆಯನ್ನು ಕೊಟ್ಟವರು ಯಾರು ? ಎಂದು ಊರಿನ ಕೆಲವು ಬುದ್ಧಿವಂತ (ಮಂಕ)ರು ಗಲಾಟೆ ಮಾಡಿದರು. ಇದೂ ಅಲ್ಲದೆ ಮತ್ತಾವುದೋ ಕಾರಣಕ್ಕಾಗಿ ಪಂಚಾಯ್ತಿ ಕೂಡಿತು. ಅವರೊಂದಿಗೆ ನಾನೇ ಮರು ವಾದಿಸಲಾರಂಭಿಸಿದೆ. ಅವರಿಗೆ ಉತ್ತರ ಕೊಡಲಾಗಲಿಲ್ಲ. ನನ್ನನ್ನೂ ಹೊಡೆದು ಬಡಿದು ಅವಮಾನಗೊಳಿಸಿದರು.

ಊರಿನ ಉದ್ಧಾರಕ್ಕೆ ಹೋದರೆ ಹೊಡೆತ ತಿನ್ನಬೇಕಾಯಿತಲ್ಲಾ ಎಂದು ಕೊರಗಿದೆ. ನನ್ನನ್ನು ಹೊಡೆದವರೆಲ್ಲಾ ಹಾಳಾಗಿ ಹೋಗಿದ್ದಾರೆ. ಅದೇ ಅಳುಕು ಇಟ್ಟುಕೊಂಡು ನನ್ನನ್ನು ಬಹಳ ಪ್ರೀತಿಯಿಂದ ಮಾತಾಡಿಸುತ್ತಾರೆ. ನನಗೆ ಗೊತ್ತು ಅವರ ಕುತ್ತು ! ಇದೆಲ್ಲಾ ನೆನಪಿನಲ್ಲಿದ್ದು ಈಗ ತನಗೆ ತಾನೇ ಮೇಲಕ್ಕೇಳುತ್ತಿದೆ. ಆದ್ದರಿಂದ ಬರೆಯಬೇಕಾಯಿತು".

### ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದು :

ಸ್ವಾತಂತ್ರ್ಯ ಚಳುವಳಿಯಲ್ಲಿಯೂ ದೇವೀರಪ್ಪನವರು ಭಾಗವಹಿಸಿದ್ದಾರೆ. ವಿದ್ಯಾರ್ಥಿ ಜೀವನದಲ್ಲಿಯೇ ಸ್ವಾತಂತ್ರ್ಯ ಚಳುವಳಿಯ ವಿಚಾರದಲ್ಲಿ ಬಹಳಷ್ಟು ತಲೆಕೆಡಿಸಿಕೊಂಡಿದ್ದರು. ದೇಶದ ಎಲ್ಲೆಡೆಯೂ ಗಾಂಧೀಜಿಯ ನೇತೃತ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯುತ್ತಿದ್ದ ಸಂದರ್ಭದಲ್ಲಿ ದೇವೀರಪ್ಪನವರ ಮನಸ್ಸೂ ಕೂಡ ಅತ್ತ ಕಡೆ ವಾಲದಿರಲಿಲ್ಲ. ಬೆಳಗುತ್ತಿ ಮಿಡ್ಲ್ ಸ್ಕೂಲಿಗೆ ಉಪಾಧ್ಯಾಯರಾಗಿ ಬಂದಿದ್ದು ಚಕ್ರವರ್ತಿ ಅಯ್ಯಂಗಾರ್ ಇವರಿಗೆ ಸ್ಫೂರ್ತಿಯ ಸೆಲೆಯಾಗಿದ್ದರು. ಅವರು ಧರಿಸುತ್ತಿದ್ದ ಖಾಕಿ ವಸ್ತ್ರ ಇವರಿಗೆ ಬಹಳ ಹಿಡಿಸಿಬಿಟ್ಟಿತ್ತು. ತಮ್ಮ ಜೊತೆಗೆ ವ್ಯಾಸಂಗ ಮಾಡುತ್ತಿದ್ದ ರಾಜಣ್ಣ ಎಂಬುವವರೊಂದಿಗೆ ಸೇರಿಕೊಂಡು ಸ್ವಾತಂತ್ರ್ಯ ಚಳುವಳಿಯ ಅನೇಕ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸತೊಡಗಿದರೂ ಸ್ವಾತಂತ್ರ್ಯ ಚಳುವಳಿ ಸಂಬಂಧದ ಹಾಡುಗಳನ್ನು ಹಾಡುವುದು, ಘೋಷಣೆಗಳನ್ನು ಕೂಗುವುದು. ಬಾವುಟಗಳನ್ನು ಪ್ರದರ್ಶಿಸುವುದು, ಎಲ್ಲ ಮನೆ ಮನೆಗಳಿಗೂ ಹೋಗಿ ಜನರನ್ನು ಎಚ್ಚರಗೊಳಿಸಿ ಹುರಿದುಂಬಿಸುವುದು ಮಾಡುತ್ತಲೇ ನಾಯಕರುಗಳ ನುಡಿಗಳನ್ನು ಉಪನ್ಯಾಸಗಳ ಮೂಲಕ ವಿವರಿಸಿ ಹೇಳುವುದು ಮಾಡುತ್ತಿದ್ದರು. ಮಹಾತ್ಮ ಗಾಂಧೀಜಿ, ಮೋತಿಲಾಲ್ ನೆಹರು, ಬಾಲಗಂಗಾಧರ ತಿಲಕ್ ಮೊದಲಾದ ಸ್ವಾತಂತ್ರ್ಯ ಹೋರಾಟಗಾರರ ಪ್ರಭಾವದಿಂದ ದೇವೀರಪ್ಪನವರೂ ಮಲ್ಲಿಗೇನಹಳ್ಳಿ, ಬೆಳಗುತ್ತಿ ಹಾಗೂ ಸುತ್ತ ಮುತ್ತಲ ಊರುಗಳಲ್ಲಿಯೂ ಸ್ವಾತಂತ್ರ್ಯ ಚಳುವಳಿಯ ಕಾವು ಮುಟ್ಟಿಸಿದರು. ಯುವಕರೊಂದಿಗೆ ಸೇರಿಕೊಂಡು ಗ್ರಾಮ ಸುಧಾರಣಾ

ಸಂಘವನ್ನು ಸ್ಥಾಪಿಸಿಕೊಂಡರು. ಆ ಮೂಲಕ ಬೀದಿ ಬೀದಿಗಳಲ್ಲಿ ಭಜನೆ, ಕೋಲಾಟ, ಭಾಷಣ ಇತ್ಯಾದಿಗಳ ಮೂಲಕ ಜಾಗೃತಿಯುಂಟುಮಾಡಲು ಯತ್ನಸಿದರು. ದೇವೀರಪ್ಪನವರ ಇಂಥ ಹೋರಾಟ ಅನೇಕ ಯುವಕರಿಗೆ ಮಾರ್ಗದರ್ಶನವಾಯಿತಲ್ಲದೆ ಎಲ್ಲರೂ ಜೊತೆಗೂಡಿ ಹೋರಾಟ ಮಾಡಲು ಪ್ರೇರಣೆಯಾಯಿತು.

**ದಂಡಿ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದು :**

"೧೯೩೧ ರ ಅಕ್ಟೋಬರ್‌ನಲ್ಲಿ ಅಥವಾ ಅದಕ್ಕಿಂತ ಕೊಂಚ ದಿನಗಳ ಹಿಂದೆ ದಂಡಿ ಸತ್ಯಾಗ್ರಹ ಆರಂಭವಾಗಿತ್ತು. ನಮಗೆ ಪರಿಚಯವಿದ್ದ ಕೆಲವರು, ಕಾಲೇಜು ವಿದ್ಯಾರ್ಥಿಗಳು, ಬಹುಶಃ ಮೈಸೂರಿನಿಂದ ಹೊರಟು ದಾವಣಗೆರೆ ಯಲ್ಲಿ ಇಳಿದಿದ್ದರು. ಅವರನ್ನು ಎದುರುಗೊಳ್ಳಲು ನಾವೂ ಹೋಗಿದ್ದೆವು. ಆ ಗುಂಪಿನಲ್ಲಿದ್ದವರು (ಅವರಾರೂ ತಾಮ್ರಪತ್ರ ಪಿಂಚಣಿ ಕೇಳುವವರಲ್ಲ) ಶ್ರೀಮಾನ್ ಸಿ.ಎಂ. ರುದ್ರಪ್ಪ (ಬೀರೂರು), ಕೆ.ಪಿ.ರುದ್ರಪ್ಪ (ಸಾಗರ), ಎಂ. ಜಿ. ಗುರುಬಸಪ್ಪ (ಶಿವಮೊಗ್ಗ) ಮುಂತಾದವರು. ಅವರನ್ನು ನೋಡಿ ನಮಗೆ ಏನೋ ಒಂದು ರೀತಿಯ ಗೌರವ, ಭಕ್ತಿ, ಅಭಿಮಾನ. ಆ ಸ್ವಯಂಸೇವಕರು ಅಲ್ಲಿಂದ ತೆರಳಿ ಹುಬ್ಬಳ್ಳಿಗೆ ಹೋಗಿ ಸತ್ಯಾಗ್ರಹದಲ್ಲಿ ಪಾಲ್ಗೊಂಡರು. ಕರನಿರಾಕರಣೆ, ಈಚಲು ಮರಗಳನ್ನು ಕಡಿದು ಹಾಕುವುದು ಅವರ ಕಾರ್ಯಕ್ರಮಗಳ ಅಂಗವಾಗಿತ್ತು. ಆ ದಿನಗಳಲ್ಲಿ ದಾವಣಗೆರೆಯಲ್ಲಿ ಪ್ರತಿ ಪ್ರಾತಃಕಾಲವೂ ಪ್ರಭಾತಪೇರಿ, ವೀರಗೀತೆಗಳು, ರಣಗೀತೆಗಳೇನು ! ನಡೆಯುತ್ತಿದ್ದುವು. ನಾನೂ ಪಾಲ್ಗೊಳ್ಳುತ್ತಿದ್ದೆ. ನಾನೂ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಬೇಕಿತ್ತು. ಅದರ ನಂತರ ಉಚಿತ ಊಟ ದೊರೆಯುವುದೋ ಇಲ್ಲವೋ ಎಂಬ ಬೆದರಿಕೆ. ಆದರೆ ಓದುಕೆಟ್ಟರೆ ! ಎಂಬುದೇ ನನ್ನ ಹೆದರಿಕೆ ಆಗಿತ್ತು. ದುಡ್ಡಿಲ್ಲದವನು ಅಂದೂ ದೇಶ ಸೇರಿಸಿ ಮಾಡಲಿಲ್ಲ. ಈಗಂತೂ ಸಾಧ್ಯವೇ ಇಲ್ಲ. ನಮ್ಮ ಸಹಪಾಠಿಗಳಲ್ಲಿ ಕೆಲವರು ಆಗ ತಕಲಿ ಪ್ರಿಯರಾಗಿದ್ದರು. ಒಬ್ಬ ಹುಡುಗ ಪಾಠ ನಡೆಯುತ್ತಿದ್ದಾಗಲೇ ತಕಲಿಯಿಂದ ನೂಲು ತೆಗೆಯುತ್ತ ಹಿಂದಿನ ಸಾಲಿನಲ್ಲಿ ಕುಳಿತಿದ್ದ. ಆ ಇಂಗ್ಲೀಷ್ ಉಪಾಧ್ಯಾಯರು Oh, you are drawing swaraj (ಸ್ವರಾಜ್) from thakali ಎಂದು ಹಾಸ್ಯ ಮಾಡಿದ್ದರು. ಸ್ವರಾಜ್ಯ ಬಂದುದು ತಕಲಿಂಯ ಮುದುಕನಿಂದಲೆ..."

ದೇವೀರಪ್ಪನವರು ರಾಜಣ್ಣನವರ ಜೊತೆಗೆ ಸೇರಿ ನಡೆಸಿದ ಉಪ್ಪಿನ

ಸತ್ಯಾಗ್ರಹ ಬಹಳ ರೋಮಾಂಚಕಾರಿಯಾದುದು. ರಾಜಣ್ಣನೊಂದಿಗೆ ಹುಬ್ಬಳ್ಳಿಗೆ ಹೋದುದು, ಧಾರವಾಡದಲ್ಲಿ ಮುರುಘಾಮಠದ ಶ್ರೀಗಳ ಆಶೀರ್ವಾದ ಪಡೆದುದು. ನಂತರ ಹುಬ್ಬಳ್ಳಿಗೆ ಹೋಗಿ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲು ಹೋಗುತ್ತಿದ್ದಾಗ ಆ ಸತ್ಯಾಗ್ರಹ ನಿಂತುಹೋಗಿದ್ದುದು, ಪುನಃ ವಾಪಾಸ್ಸು ಊರಿಗೆ ಹೊರಟು ಬಂದುದು, ಊರಿನ ಜನ ಇವರನ್ನು 'ಸ್ವಾತಂತ್ರ್ಯ ಯೋಧ'ರೆಂದು ಭಾವಿಸಿ ನೋಡಲು ಬಂದುದು, ಇವೆಲ್ಲವೂ ಕೂಡ ದೇವೀರಪ್ಪನವರ ಬದುಕಿನಲ್ಲಿ ಹೊಸ ಚೈತನ್ಯ ಉಂಟು ಮಾಡಿತ್ತೆಂಬುದನ್ನು ಕಂಡುಕೊಳ್ಳಬಹುದು. ರಾಜಣ್ಣನವರು ದೇವೀರಪ್ಪನವರ ಜೊತೆಯಲ್ಲಿದ್ದಷ್ಟು ಕಾಲವೂ ಸ್ಫೂರ್ತಿ ಸೆಲೆಯಾಗಿಯೇ ಇದ್ದವರು. ಪ್ರವಾಸದ ನೆಪದಲ್ಲಿ ಊರೂರುಗಳನ್ನು ಸುತ್ತಿ ಸುತ್ತಿ ದೊಡ್ಡ ದೊಡ್ಡ ಮಹನೀಯರನ್ನು ಪರಿಚಯ ಮಾಡಿಕೊಂಡರು. ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರನ್ನು ಭೇಟಿ ಮಾಡಿ ದರ್ಶನ ಪಡೆದುಕೊಂಡರು. ದೇವೀರಪ್ಪನವರ ಗ್ರಂಥಾಸಕ್ತಿ ಅಲ್ಲಿನ ಜೈನ ಗ್ರಂಥಭಂಡಾರದ ಕಡೆಗೆ ಹರಿಯಿತಲ್ಲದೆ, ಆ ಗ್ರಂಥ ಭಂಡಾರದ ಮುಖ್ಯಸ್ಥರಾದ ಭುಜಬಲಿಶಾಸ್ತ್ರಿಗಳಿಂದ ಗ್ರಂಥಾಲಯದಲ್ಲಿನ ಗ್ರಂಥಗಳ ವಿವರ ಪಡೆದುಕೊಂಡರು. ಅಲ್ಲಿದ್ದ 'ದವಳ' 'ಮಹಾಧವಳ' ಎಂಬ ಜೈನ ಪವಿತ್ರ ಗ್ರಂಥಗಳ ಬಗ್ಗೆ ಆಸಕ್ತಿ ವಹಿಸಿ ಪರಿಚಯ ಮಾಡಿಕೊಂಡರು. ಹೀಗೆ ಇನ್ನು ಮುಂತಾದ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡಿದ ಇವರಿಬ್ಬರೂ ಪ್ರವಾಸದ ಸಂದರ್ಭದಲ್ಲಿ ಹೊಸ ಹೊಸ ಅನುಭವ ಗಳಿಸಿಕೊಂಡರು. ದೇವೀರಪ್ಪನವರಿಗೆ ಮುಂದಿನ ದಿನಗಳಲ್ಲಿ ಹಸ್ತಪ್ರತಿ, ಓಲೆಗರಿಗಳನ್ನು ಸಂಗ್ರಹಿಸುವುದಕ್ಕೆ ಬಹಳಷ್ಟು ನೆರವಾಯಿತು. ತಾವು ಎಲ್ಲೇ ಹೋಗಲಿ, ಉಳಿದುಕೊಂಡಿರಲಿ, ತಮ್ಮ ದೃಷ್ಟಿಕೋನವನ್ನು ಪ್ರಾಚೀನ ಗ್ರಂಥಗಳ ಕಡೆಗೇ ಹರಿಸುತ್ತಿದ್ದರು. ಏನಾದರೂ ಶೋಧ ಮಾಡುತ್ತಲೇ ಸಂಶೋಧನೆಯ ಆಸಕ್ತಿಯನ್ನು ಬೆಳೆಸಿಕೊಳ್ಳುತ್ತಾ ಹೋದರು. ಹಾಗಾಗಿ ಮೌಲಿಕ ಗ್ರಂಥಗಳು ದೇವೀರಪ್ಪನವರನ್ನು ಆಕರ್ಷಿತಗೊಂಡವು. ಅವುಗಳ ಬಗ್ಗೆ ಕೆಲಸ ಮಾಡಲು ಅಧ್ಯಯನಾಸಕ್ತಿ ಮೂಡಿಸಿದವು.

### ಹಸ್ತಪ್ರತಿ ಸಂಗ್ರಹ ಸಾಧನೆ :

ದೇವೀರಪ್ಪನವರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿದ್ದಾಗ ತಾವು ಸಂಗ್ರಹಿಸಿದ ಹಸ್ತ ಪ್ರತಿಗಳು ಹಾಗೂ ಪ್ರಕಟಿಸಿರುವ ಪುಸ್ತಕಗಳ ಬಗ್ಗೆ ಒಂದು ಪಟ್ಟಿಯನ್ನು, ಮೂರು ಅವಧಿಗಳಲ್ಲಾದ ಕೆಲಸವನ್ನು

ಹಿನ್ನೆಲೆಂಇವಾಗಿಟ್ಟುಕೊಂಡು, ಇಲ್ಲಿ ನೀಡಿದ್ದಾರೆ. ಪ್ರತಿ ಹತ್ತು ವರ್ಷಗಳಲ್ಲಾಗಿರುವ ಸಾಧನೆಯನ್ನು ಇಲ್ಲಿ ಕೋಷ್ಟಕದಲ್ಲಿ ಕೊಟ್ಟಿರುವುದನ್ನು ಗಮನಿಸಬಹುದು.

| ಕ್ರ. | ವರ್ಷ | ಹಸ್ತಪ್ರತಿ ಸಂಗ್ರಹಿಸಿದ್ದು | | | ಪುಸ್ತಕ ಪ್ರಕಟಣೆ | | | | ಒಟ್ಟು |
|---|---|---|---|---|---|---|---|---|---|
| ಸಂ. | | ಸಂಸ್ಕೃತ | ಕನ್ನಡ | ಒಟ್ಟು | ಸಂಸ್ಕೃತ | ಕನ್ನಡ | ಇತರೆ | | |
| ೧. | ೧೯೩೫ ರಿಂದ ೧೯೪೫ | ೨೦೦ | ೧೩೫ | ೩೩೫ | ೮ | ೩ | ೧ | – | ೧೨ |
| ೨. | ೧೯೪೫ ರಿಂದ ೧೯೫೫ | ೧೯೯ | ೧೬೪ | ೩೬೩ | ೯ | ೬ | ೨ | ೧ | ೧೮ |
| ೩. | ೧೯೫೫ ರಿಂದ ೧೯೬೫ | ೬೦೧೨ | ೮೨೭ | ೬೮೩೯ | ೧೪ | ೧೩ | ೧ | ೫ | ೩೩ |
| | ಘೋಷ್ವಾರೆ | | | | | | | | |
| ೧. | ೧೯೫೫ ರಿಂದ ೧೯೫೫ ಮೊದಲ ೨೦ ವರ್ಷ | ೩೯೯ | ೨೯೯ | ೬೯೮ | ಪುಸ್ತಕ ಪ್ರಕಟಣೆ ೩೦ | | | | |
| ೨. | ೧೯೫೫ ರಿಂದ ೧೯೬೫ | ೬೦೧೨ | ೮೨೭ | ೬೮೩೯ | ಪುಸ್ತಕ ಪ್ರಕಟಣೆ ೩೩ | | | | |

ಮೇಲ್ಕಂಡ ಪಟ್ಟಿಯನ್ನು ಗಮನಿಸಿದಾಗ ಶ್ರೀ ದೇವೀರಪ್ಪನವರು ೧೯೫೫ ರಿಂದ ೧೯೬೫ ರ ಅವಧಿಯಲ್ಲಿ ಊರೂರು ತಿರುಗಿ ಸಂಗ್ರಹಿಸಿದ ಹಸ್ತ ಪ್ರತಿಗಳು ಸಾಕಷ್ಟು, ಪ್ರಕಟಿಸಿದ ಕೃತಿಗಳು ಜಾಸ್ತಿ. ಹಳ್ಳಿಯಿಂದ ಬಂದು ವಿದ್ವತ್ತಿನ ಸ್ಥಾನವನ್ನಲಂಕರಿಸಿ ಮಾಡಿರುವ ಸಾಧನೆ ಅನನ್ಯವಾದುದು. ಸಂಶೋಧನಾ ಕ್ಷೇತ್ರದಲ್ಲಿ ದೇವೀರಪ್ಪನವರ ಹೆಸರು ನಿಜಕ್ಕೂ ಚಿರಸ್ಥಾಯಿ ಯಾದುದು.

ಪ್ರಭಾವ ಬೀರಿದ ಕೃತಿ, ಕವಿಗಳು :

ದೇವೀರಪ್ಪನವರು ತಮ್ಮ ಮೇಲೆ ತಮ್ಮ ಸಾಹಿತ್ಯ ಕೃಷಿಯ ಮೇಲೆ ಪ್ರಭಾವ ಬೀರಿದ ಕೃತಿಗಳು, ಕವಿಗಳು, ವಿದ್ವಾಂಸರನ್ನು ಸದಾಕಾಲ ನೆನೆಸಿಕೊಂಡಿದ್ದಾರೆ. ತಮಗೆ ದೊರಕಿದಂತಹ ವಿದ್ಯಾಗುರುಗಳಲ್ಲಿ ಬಿಎಂಶ್ರೀ,



ಅಧ್ಯಯನದ ಕೊಠಡಿಯಲ್ಲಿ

ಡಿಎಲ್‌ಎನ್, ತೀನಂಶ್ರೀ, ಟಿ.ಎಸ್.ವೆಂಕಣ್ಣಯ್ಯ, ವಿ.ಸೀ., ಕೆ.ವೆಂಕಟರಾಮಪ್ಪ, ಪ್ರಣವಾರ್ಥಿಹರನ್, ಎ.ಆರ್. ಕೃಷ್ಣಶಾಸ್ತ್ರಿಯಂಥ ಮಹಾನ್ ವಿದ್ವಾಂಸರು ತಮ್ಮ ಸಂಶೋಧನಾಕಾರ್ಯಕ್ಕೆ ಸ್ಫೂರ್ತಿ, ಶಕ್ತಿಗಳನ್ನು ತುಂಬಿದ್ದರೆಂದು ಹೇಳಿಕೊಂಡಿದ್ದಾರೆ. ೧೦-೧೨ನೇ ವಯಸ್ಸಿನಲ್ಲೇ ಗಳಗನಾಥರ ಕಾದಂಬರಿ ಹಾಗೂ ಇತರ ಕೃತಿಗಳು ತಮ್ಮ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದವು. ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಕುವೆಂಪುರವರ ಗದ್ಯಪದ್ಯ ಕೃತಿಗಳು, ಬೇಂದ್ರೆಯವರ 'ಸಖೀಗೀತ'. 'ಗರಿ' ಮುಂತಾದ ಕವನ ಸಂಗ್ರಹಗಳು, ಮಧುರಚೆನ್ನರ 'ನನ್ನನಲ್ಲ' ಕೃತಿ, ಬಸವಾದಿ ಪ್ರಮಥರ ವಚನ ಸಾಹಿತ್ಯ, ಸರ್ವಜ್ಞನ ವಚನಗಳು, ಇತ್ತೀಚೆಗೆ ಹರಿಹರನೊಬ್ಬನೇ ನನ್ನ ವ್ಯಕ್ತಿತ್ವವನ್ನೆಲ್ಲ ಆವರಿಸಿ ಕುಳಿತಿರುವ ಮಹಾಕವಿ, ಅಲ್ಲಿ ಕೆದಕಿದಷ್ಟು ಬಂಗಾರವೇ ಬರುತ್ತಿದೆ-ಎಂದು ಹೇಳಿಕೊಂಡಿರುವ ದೇವೀರಪ್ಪನವರಿಗೆ 'ಹರಿಹರ'ನೇ ಬದುಕಿನುದ್ದಕ್ಕೂ ಜೀವನಾಡಿಯಾಗಿದ್ದಾನೆ. ಅವನೇ ಜೀವನದ ಉಸಿರಾಗಿ ಬೆಳಕನ್ನಿತ್ತಿದ್ದಾನೆ. ಹಾಗಾಗಿಯೇ ಅವನ ಹೆಸರನ್ನು ಶಾಶ್ವತಗೊಳಿಸಲೆಂದೇ ತಾವು ಬೆಂಗಳೂರಿನಲ್ಲಿ ಕಟ್ಟಿರುವ ಮನೆಗೆ 'ಹರಿಹರ' ಎಂದೇ ನಾಮಕರಣ ಮಾಡಿ ಚಿರಸ್ಥಾಯಿಯಾಗಳಿಸಿದ್ದಾರೆ.

ನಿಧನ :

ಇಂತಹ ಮಹಾನ್ ಚೇತನ, ಮಹಾನ್ ಸಂಶೋಧಕ, ಮಹಾನ್

ಸಾಹಿತ್ಯ ನಿರ್ಮಾತೃ ನಮ್ಮ ಕನ್ನಡ ಸಾಹಿತ್ಯಕ್ಕೆ, ಶರಣ ಸಾಹಿತ್ಯಕ್ಕೆ ಅದರಲ್ಲೂ ಸಂಶೋಧನಾ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾದುದು, ಅನನ್ಯವಾದುದು. ತಮ್ಮ ಬದುಕಿನಲ್ಲಿ ಏನೆಲ್ಲಾ ಕಷ್ಟಕೋಟಲೆಗಳು ಎದುರಾದರೂ ಎದೆಗುಂದದೆ ಧೈರ್ಯವಾಗಿ ಮುನ್ನುಗ್ಗಿ ಹಳ್ಳಿಯ ಸೊಗಡಿನೊಂದಿಗೆ ಬದುಕಿ ನಗರ ಬದುಕಿನಲ್ಲಿ ಬೆಂದು ಮಕ್ಕಳೆಲ್ಲರಿಗೂ ವಿದ್ಯೆಯನ್ನು ಧಾರೆಯೆರೆದು ೩.೧.೮೮ರಂದು ಬೆಳಗಿನ ಜಾವ ದಾವಣಗೆರೆಯಲ್ಲಿ ತಮ್ಮ ಮಗ ಎಚ್.ಡಿ. ಶ್ರೀನಾಗೇಶ ಅವರ ಮನೆಯಲ್ಲಿ ಹೃದಯಾಘಾತಕ್ಕೆ ಒಳಗಾಗಿ ಚಿಗಟೇರಿ ಆಸ್ಪತ್ರೆಗೆ ಹೋಗಿ ಅಲ್ಲಿ ಕೊನೆಯುಸಿರೆಳೆದರು. ಆ ಒಂದು ಘಳಿಗೆ ಸಂಶೋಧನಾ ಕ್ಷೇತ್ರದ ದಿಗ್ಗಜನನ್ನು ಕಳೆದುಕೊಂಡು ನಿರುತ್ತರನಾಯಿತು. ಇಡೀ ಕುಟುಂಬ ವರ್ಗವೇ ಆ ಒಂದು ಕ್ಷಣದಲ್ಲಿ ಕಣ್ಣೀರಧಾರೆಯೆರೆಯಿತು. ನಾಡಿನ ಸಮಸ್ತ ಕವಿ, ಲೇಖಕ, ಸಂಶೋಧಕ ಬಂಧುಗಳು ಅಗಲಿದ ಮಹಾನ್ ಚೇತನಕ್ಕೆ ಕಂಬನಿ ಮಿಡಿಯಿತು. ಕನ್ನಡ ಸಾಹಿತ್ಯ ಲೋಕಕ್ಕೆ ತುಂಬಲಾರದ ನಷ್ಟ ಬಂದೆರಗಿತು.

**ಅಶ್ರುತರ್ಪಣ :**

ಶ್ರೀ ಹೆಚ್. ದೇವೀರಪ್ಪನವರು ೩.೧.೧೯೮೮ ರಲ್ಲಿ ನಿಧನರಾದ ಸುದ್ದಿ ಸಮೂಹ ಮಾಧ್ಯಮಗಳಲ್ಲಿ ಪ್ರಕಟಗೊಂಡ ಸಂದರ್ಭದಲ್ಲಿ ಹಲವಾರು ಗಣ್ಯ ಸಾಹಿತಿಗಳು, ಕವಿಗಳು, ಸಂಶೋಧಕರು ಮೊದಲಾದವರು ಕಂಬನಿ ಮಿಡಿದರು. ಅನೇಕ ಮಠಮಾನ್ಯಗಳ ಶ್ರೀಗಳವರು ಕುಟುಂಬ ವರ್ಗದವರಿಗೆ ಸಾಂತ್ವನ ಹೇಳಿದರು. ೭೫ ವರ್ಷಗಳ ತುಂಬು ಜೀವನ ನಡೆಸಿ ಕನ್ನಡ ಸಾಹಿತ್ಯಕ್ಕೆ, ವೀರಶೈವ ಸಮಾಜಕ್ಕೆ, ಶರಣ ಸಾಹಿತ್ಯಕ್ಕೆ, ಅದರಲ್ಲೂ ಸಂಶೋಧನಾ ಕ್ಷೇತ್ರಕ್ಕೆ ಅಪಾರವಾದ ಕೊಡುಗೆಯನ್ನೇ ಧಾರೆಯೆರೆದ ಈ ಶರಣ ಮಹನೀಯರನ್ನು ಕುರಿತು ಅನೇಕರಿಂದ ಪತ್ರಗಳು ಅವರ ಕುಟುಂಬ ವರ್ಗದವರಿಗೆ ಸಾಂತ್ವನ ಹೇಳುವ ಮೂಲಕ ಹರಿದು ಬಂದುವು. ಪತ್ರಿಕೆಗಳಲ್ಲಿ ಒಂದೋ ಎರಡೋ ಲೇಖನ ಮಾತ್ರ ಪ್ರಕಟವಾದುವು. ಜೀನಹಳ್ಳಿ ಸಿದ್ಧಲಿಂಗಪ್ಪನವರು ೩.೧.೧೯೮೮ ರಲ್ಲಿ 'ಕನ್ನಡ ಪ್ರಭ' ದಲ್ಲಿ 'ಮಲ್ಲಿಗೇನ ಹಳ್ಳಿ ಮಲ್ಲಿಗೆ' ಎಂಬ ಶೀರ್ಷಿಕೆಯಡಿ ಲೇಖನವನ್ನು ಬರೆದು ಗೌರವ ಸಲ್ಲಿಸಿದರು. ಇವರ ಬಗ್ಗೆ 'ಮರುಳ ಸಿದ್ಧ' ಕಾವ್ಯವನ್ನು ಬೆಳಕಿಗೆ ತಂದ ಶ್ರೀ ಎಚ್. ದೇವೀರಪ್ಪನವರ ನಿಧನ – ಎಂಬ ಲೇಖನ ತರಳಬಾಳು 'ವಾರ್ತಾ ಪತ್ರ' ಫೆಬ್ರವರಿ ೧೯೮೮ರಲ್ಲಿ ಪ್ರಕಟವಾಗಿದೆ. 'ಪ್ರಸಾದ' ಪತ್ರಿಕೆಯಲ್ಲಿ ಚನ್ನಪ್ಪ

ಎರೇಸೀಮೆ ಅವರ ಲೇಖನ ಪ್ರಕಟವಾಯಿತು. ತದನಂತರದಲ್ಲಿ ಬೇರೆ ಯಾವ ಪತ್ರಿಕೆಯಲ್ಲಿಯೂ ದೇವೀರಪ್ಪನವರ ಬಗ್ಗೆ ಸಂಶೋಧಕರಾಗಲಿ, ಸಾಹಿತಿಗಳಾಗಲಿ, ಲೇಖಕರಾಗಲಿ ಲೇಖನವನ್ನು ಬರೆದಿರುವುದು ಕಂಡುಬರಲಿಲ್ಲ. ಒಬ್ಬ ಖ್ಯಾತ ಸಂಶೋಧಕರನ್ನು ಕುರಿತಂತೆ ವಿದ್ವಾಂಸರ ವಲಯ ಕಣ್ಣುಮುಚ್ಚಿ ಕುಳಿತಿತು. ಅವರು ಇದ್ದಾಗಲೂ ಗೌರವಿಸಲಿಲ್ಲ, ನಿಧನರಾದ ಮೇಲೆಯೂ ನೆನೆಯಲಿಲ್ಲ ಎಂಬುದು ಅವರ ಕುಟುಂಬವರ್ಗದ ಅಳಲಾಗಿ ಉಳಿದು ಬಿಟ್ಟಿತು. ದೇವೀರಪ್ಪನವರ ಬಗ್ಗೆ ಅತ್ಯಂತ ಪ್ರೀತಿ, ವಿಶ್ವಾಸ, ಅಭಿಮಾನಗಳಿಟ್ಟು ಕೊಂಡಿದ್ದಂತಹ ಕವಿ, ಲೇಖಕರಲ್ಲಿ ಕೆಲವರಾದರು ತುಂಬು ಹೃದಯದಿಂದ ಸ್ಮರಿಸಿಕೊಂಡಿದ್ದಾರೆ.

ಪ್ರಾರಂಭದಿಂದಲೂ ತರಳಬಾಳು ಸಂಸ್ಥೆಯ ಬಗ್ಗೆ ಅತ್ಯಂತ ಗೌರವವನ್ನಿಟ್ಟುಕೊಂಡಿದ್ದ, ದೇವೀರಪ್ಪನವರನ್ನು ಕುರಿತು ತರಳಬಾಳು ಜಗದ್ಗುರು ಶ್ರೀ *ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು* ದೇವೀರಪ್ಪನವರ ನಾಲ್ಕು ಮಕ್ಕಳ ಹೆಸರಿಗೆ ೧೧.೧.೧೯೮೮ರಲ್ಲಿ ಒಂದು ಪತ್ರ ಬರೆದು ಸಾಂತ್ವನ ಹೇಳಿದರು. "ಶ್ರೀಯುತರು ಮೈಸೂರಲ್ಲಿ ಇದ್ದಾಗಿನಿಂದ ಕನ್ನಡ ಸಾಹಿತ್ಯಕ್ಕೆ ವೀರಶೈವ ಸಾಹಿತ್ಯಕ್ಕೆ ಮುಖ್ಯವಾಗಿ ತರಳಬಾಳು ಜಗದ್ಗುರು ಬೃಹನ್ಮಠದ ಇತಿಹಾಸಕ್ಕೆ ವಿಶೇಷವಾಗಿ ಬಾಳ್ಗುಳಿಯ ದೇವ ಕವಿಯ ವ್ಯಕ್ತಿತ್ವವನ್ನು ಬೆಳೆಸಲು ತುಂಬಾ ಶ್ರಮಿಸಿದ್ದಾರೆ. ಇದಕ್ಕಾಗಿ ನಾವು ಅವರನ್ನು ಎಂದೂ ಮರೆಯುವುದಿಲ್ಲ. ವೀರಶೈವ ಸಾಹಿತ್ಯದ ಬಗ್ಗೆ ಅವರ ಮತ್ತು ನಮ್ಮ ಗುರಿ ಒಂದೇ ಆಗಿತ್ತು" ದೇವೀರಪ್ಪನವರು ವೀರಶೈವ ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ಇಲ್ಲಿ ಮನಬಿಚ್ಚಿ ಹೇಳಿದ್ದಾರೆ.

ಹಾಗೆಯೇ *ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳು* ತೋಂಟದಾರ್ಯ ಸಂಸ್ಥಾನ ಮಠ, ಡಂಬಳ ಗದಗ ಇವರ ಕಾರ್ಯದರ್ಶಿಗಳಾದ ಶ್ರೀ.ಪಿ. ಶಿವಾನಂದ ಅವರು ೬.೧.೧೯೮೮ರಲ್ಲಿ ದೇವೀರಪ್ಪನವರ ಅಳಿಯಂದಿರಾದ ಡಾ. ಪಿ.ಬಸಪ್ಪ ಅವರಿಗೆ ಪತ್ರ ಬರೆದು, ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ : "ಕನ್ನಡದ ಹಿರಿಯ ಲೇಖಕ, ಖ್ಯಾತ ಸಂಶೋಧಕ ಎಚ್. ದೇವೀರಪ್ಪ ಅವರು ಲಿಂಗೈಕ್ಯರಾದ ವಾರ್ತೆ ನೀವು ಕಳುಹಿಸಿದ ತಾರು ಅಲ್ಲದೆ ಪತ್ರಿಕೆಗಳಿಂದ ತಿಳಿದು ಗುರುಗಳ ಮನಸ್ಸಿಗೆ ತುಂಬಾ ವಿಷಾದ ವುಂಟಾಯಿತು.

ಶ್ರೀ ಎಚ್. ದೇವೀರಪ್ಪನವರ ಅಗಲುವಿಕೆಯಿಂದ ಈ ನಾಡು ಒಬ್ಬ ಹಳೇತಲೆಮಾರಿನ ಪ್ರಖ್ಯಾತ ಬರಹಗಾರ, ಪ್ರಸಿದ್ಧ ಸಂಶೋಧಕನನ್ನು

ಕಳೆದುಕೊಂಡು ಬಡವಾಗಿದೆ. ವೀರಶೈವ ಸಾಹಿತ್ಯದ ಬಗೆಗೆ ಅವರಿಗಿದ್ದ ಅಪಾರ ಕಳಕಳಿ, ಅಭಿಮಾನ ಶ್ಲಾಘನೀಯವಾಗಿದೆ. ನಮ್ಮ ಶ್ರೀ ಮಠದ ಆಶ್ರಯದಲ್ಲಿರುವ ವೀರಶೈವ ಅಧ್ಯಯನಸಂಸ್ಥೆ ಪ್ರಾರಂಭಿಸಿದ ವೀರಶೈವ ಪುಣ್ಯ ಪುರುಷ ಸಾಹಿತ್ಯ ಮಾಲಿಕೆಗೆ ಅವರಿಂದ ಅಮೋಘ ಸೇವೆ ಸಂದಿದೆ. ತುಂಬಾ ಸಾರ್ಥಕ ಜೀವನ ಬದುಕಿದ ಶ್ರೀಯುವರು ಅಗಲಿದರೂ ಅವರ ಕೃತಿಗಳು ಅವರನ್ನು ಅಮರರನ್ನಾಗಿ ಮಾಡಿವೆ".

ದೇವೀರಪ್ಪನವರಿಗೆ ಅತ್ಯಂತ ಆತ್ಮೀಯರಾಗಿದ್ದ ಖ್ಯಾತ ಪ್ರಗತಿಶೀಲ ಲೇಖಕರಾದ, ಸಾಹಿತಿಗಳಾದ *ಶ್ರೀ ಬಸವರಾಜ ಕಟ್ಟೀಮನಿಯುವರು* ೫.೧.೧೯೮೮ರಲ್ಲಿ ದೇವೀರಪ್ಪನವರ ಪತ್ನಿಗೆ ಪತ್ರ ಬರೆದು ತಾವು ಬರೆಯಬೇಕಿದ್ದ ಕೃತಿಗೆ ದೇವೀರಪ್ಪನವರು ಒತ್ತಾಯಿಸಿದ್ದರ ಬಗ್ಗೆ ನೆನಪಿಸಿದ್ದಾರೆ : "ನನ್ನ ಪರಮ ಮಿತ್ರರೂ ನಾಡಿನ ಖ್ಯಾತ ಸಾಹಿತಿ ಸಂಶೋಧಕರೂ, ಬಸವಣ್ಣನವರ ನಿಷ್ಠ ಅಭಿಮಾನಿಯೂ ಆಗಿದ್ದ ಶ್ರೀ ದೇವೀರಪ್ಪನವರು ದಾವಣಗೆರೆಯಲ್ಲಿ ನಿಧನರಾದ ವಾರ್ತೆ ಇಂದು 'ಸಂಯುಕ್ತ ಕರ್ನಾಟಕ' ದಲ್ಲಿ ಬಂದಿದೆ. ಮೊದಲೇ ಗೊತ್ತಾಗಲಿಲ್ಲ.

ಶ್ರೀ ದೇವೀರಪ್ಪನವರಿಂದ ೧೯.೧೨.೧೯೮೭ ರಂದು ಬೆಂಗಳೂರಿನಿಂದ ನನಗೆ ಕಾಗದ ಬರೆದು ಬಸವಣ್ಣನವರ ಕಾದಂಬರಿ ಬರೆದು ಮುಗಿಸಲು ಒತ್ತಾಯ ಮಾಡಿದ್ದರು. ಅದೇ ಅವರ ಕಡೆಯ ಕಾಗದವಾಯಿತು. ನನಗೂ ದೇಹಾರೋಗ್ಯ ಸರಿಯಾಗಿಲ್ಲ. ಬಲಗೈ ನೋವಿನಿಂದಾಗಿ ಉತ್ತರ ಬರೆಯಲಿಲ್ಲ. ಈಗ ದುಃಖವಾಗುತ್ತದೆ.

ದಯವಿಟ್ಟು ತಾವು, ತಮ್ಮ ಕುಟುಂಬದವರೆಲ್ಲರೂ ತಮ್ಮ ದುಃಖವನ್ನು ಸೈರಿಸಿಕೊಳ್ಳಬೇಕಾಗಿ ವಿನಂತಿ". ಹೀಗೆ ದೇವೀರಪ್ಪನವರಿಗೂ ಇವರಿಗೂ ನಡುವೆ ಇದ್ದ ಸ್ನೇಹ ಬಾಂಧವ್ಯದ ಈ ಪತ್ರ ಆತ್ಮೀಯತೆಯ ಸಂಕೇತವಾಗಿ ಕಂಡು ಬರುತ್ತದೆ.

**ನಾಡೋಜ *ಚೆನ್ನವೀರ ಕಣವಿ*** ಅವರು ದೇವೀರಪ್ಪನವರ ಬಗ್ಗೆ ಬಹಳಷ್ಟು ಅಭಿಮಾನ ಇಟ್ಟುಕೊಂಡವರು. ವಯಸ್ಸಿನಲ್ಲಿ ತಾವು ಕಿರಿಯರಾಗಿದ್ದರೂ ದೇವೀರಪ್ಪನವರು ಹಿರಿಯ ಸ್ನೇಹಿತರಾಗಿ, ಹಿತೈಷಿಗಳಾಗಿ ಮಾರ್ಗದರ್ಶಕ ರಾಗಿದ್ದವರು ಎಂದು ಹೇಳಿಕೊಳ್ಳುವ ಚೆನ್ನವೀರ ಕಣವಿ ಅವರು ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದೇವೀರಪ್ಪನವರ ಕಿರಿಯ ಮಗ ಶ್ರೀ ನಾಗೇಶ್ ಅವರಿಗೆ ೧೨.೧.೧೯೮೮ರಲ್ಲಿ ಬರೆದ ಪತ್ರದಲ್ಲಿ "ಶ್ರೀ ಎಚ್.ದೇವೀರಪ್ಪನವರು ಶಿವೈಕ್ಯರಾದ ವಾರ್ತೆ ಕೇಳಿ ತುಂಬ ದುಃಖವೆನಿಸಿತು. ಕಳೆದ ಡಿಸೆಂಬರದಲ್ಲಿಯೇ

ಅವರಿಂದ ಎರಡು ಪತ್ರಗಳು ನಮಗೆ ಬಂದಿದ್ದುವು. ನಮ್ಮ ಮಗಳ ಮದುವೆಗೆ ಶುಭ ಕೋರಿದ್ದಲ್ಲದೆ ಶ್ರೀಮತಿ ಕಣವಿಯವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಪಡೆದದ್ದಕ್ಕೆ ಹಾರ್ದಿಕ ಅಭಿನಂದನೆಗಳನ್ನು ತಿಳಿಸಿದ್ದರು. ಇಷ್ಟು ಬೇಗ ಅವರು ನಮ್ಮಿಂದ ಅಗಲಿ ಹೋಗುತ್ತಾರೆಂದು ಎಣಿಸಿರಲಿಲ್ಲ.

ಕಳೆದ ಮೂರು ದಶಕಗಳಿಂದಲೂ ಅವರು ಹಿರಿಯ ಸ್ನೇಹಿತರಾಗಿ, ಆತ್ಮೀಯ ಹಿತೈಷಿಗಳಾಗಿ ನಮ್ಮೊಡನೆ ಇಟ್ಟುಕೊಂಡಿದ್ದ ಮಧುರ ಬಾಂಧವ್ಯವನ್ನು ಮರೆಯುವಂತಿಲ್ಲ. ಅನೇಕ ಪ್ರಾಚೀನ ಗ್ರಂಥಗಳ ಸಂಪಾದಕರಾಗಿ, ಖ್ಯಾತ ಸಂಶೋಧಕರಾಗಿ ಕನ್ನಡ ಸಾಹಿತ್ಯಕ್ಕೆ ಅವರು ಸಲ್ಲಿಸಿರುವ ಸೇವೆ ಅನನ್ಯವಾದದ್ದು. ಯಾವ ಆಮಿಷಗಳಿಗೂ ಒಳಗಾಗದ ಸತ್ಯ ಪ್ರತಿಪಾದನೆ ಅವರ ಸಂಶೋಧನೆಯ ಬೆಲೆಯನ್ನು ಹೆಚ್ಚಿಸಿತ್ತು. ಕಾದಂಬರಿ ಹಾಗೂ ನಾಟಕ ಕ್ಷೇತ್ರದಲ್ಲಿಯೂ ಅವರು ಉತ್ತಮ ಕೃತಿಗಳನ್ನು ನೀಡಿದ್ದರು. ಹಲವಾರು ವ್ಯಾಧಿಗಳಿಗೆ ಈಡಾಗಿದ್ದರು. ದೈಹಿಕ ಶ್ರಮವನ್ನು ಪರಿಗಣಿಸದೆ ಕೊನೆಯವರೆಗೂ ತಮ್ಮ ಲೇಖನವನ್ನು ಎತ್ತಿ ಹಿಡಿದ ಧೀರ ಪ್ರವೃತ್ತಿ ಸ್ಮರಣೀಯವಾದದ್ದು".

ಚೆನ್ನವೀರ ಕಣವಿಯವರು ಬರೆದ ಈ ಪತ್ರದಲ್ಲಿನ ಎರಡನೇ ಭಾಗದಲ್ಲಿ ದೇವೀರಪ್ಪನವರ ಇಡೀ ಸಾಹಿತ್ಯ ಶೋಧನೆಯ ಬದುಕನ್ನು ಸಮಗ್ರವಾಗಿ ಹಿಡಿದಿಟ್ಟಿರುವುದು ಕಂಡುಬರುತ್ತದೆ. ಆದುದರಿಂದ ದೇವೀರಪ್ಪನವರ ಶ್ರಮ, ಪರಿಶ್ರಮಗಳು ಕನ್ನಡ ಸಾಹಿತ್ಯ ಲೋಕವನ್ನು ಅದರಲ್ಲೂ ಸಂಶೋಧನಾ ಲೋಕವನ್ನು ಸಮೃದ್ಧಗೊಳಿಸಿರುವುದು ನಮ್ಮೆಲ್ಲರಿಗೂ ತಿಳಿದುಬರುವ ಸಂಗತಿಯಾಗಿದೆ.

ಶ್ರೀಮತಿ *ಶಾಂತಾದೇವಿ ಮಾಳವಾಡ* ಅವರು ದೇವೀರಪ್ಪನವರ ಮಗ ಶ್ರೀನಾಗೇಶ್ ಅವರಿಗೆ ೪.೨.೧೯೮೮ ರಲ್ಲಿ ಬರೆದ ಪತ್ರದಲ್ಲಿ "ಶ್ರೀದೇವೀರಪ್ಪನವರು ಕನ್ನಡ ಸಾಹಿತ್ಯಕ್ಕೆ, ವೀರಶೈವ ಸಮಾಜಕ್ಕೆ ಅಪಾರ ಸೇವೆ ಸಲ್ಲಿಸಿ ಚಿರಸ್ಮರಣೀಯರಾಗಿದ್ದಾರೆ" ಎಂದೂ ಸಹ ಸ್ಮರಿಸಿದ್ದಾರೆ.

ಹಾಗೆಯೇ *ಶಾಂತರಸ* ಅವರು ರಾಯಚೂರಿನಿಂದ ೮.೧.೧೯೮೮ರಲ್ಲಿ ಶ್ರೀಮತಿ ದೇವೀರಪ್ಪನವರಿಗೆ ಬರೆದ ಪತ್ರದಲ್ಲಿ "ಶ್ರೀ ದೇವೀರಪ್ಪನವರು ಲಿಂಗೈಕ್ಯರಾದ ಸುದ್ದಿ ತಿಳಿದು ಆಘಾತವಾಯಿತು. ಇದು ಭರಿಸಲಾಗದ ದುಃಖ. ಸಾಹಿತ್ಯ ಲೋಕಕ್ಕೆ ಅಪಾರ, ತುಂಬಲಾರದ ಹಾನಿ, ನನ್ನ ಮಟ್ಟಿಗಂತೂ ಒಬ್ಬ ಹಿರಿಯ ಹಿತಚಿಂತಕರನ್ನು ಕಳೆದುಕೊಂಡ ನೋವು ಉಂಡು ಅರಗಿಸಿಕೊಳ್ಳಲಾರದಂತಹುದು" ಎಂದಿದ್ದಾರೆ.

ಜಾನಪದ ವಿದ್ವಾಂಸರಾದ, ದೇವೀರಪ್ಪನವರ ಬಗ್ಗೆ ಗುರು ಸಮಾನ

ಭಾವನೆಯನ್ನಿಟ್ಟುಕೊಂಡಿದ್ದ **ಶ್ರೀ ಬಸವರಾಜ ಮಲಶೆಟ್ಟಿಯವರು** ಶ್ರೀಬಸವರಾಜ ಮಲಶೆಟ್ಟಿಯವರು ಶ್ರೀನಾಗೇಶ್ ಅವರಿಗೆ ಬರೆದ ಪತ್ರದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತಗೊಳಿಸಿದ್ದಾರೆ: "ವೈಯುಕ್ತಿಕವಾಗಿ ದೇವೀರಪ್ಪನವರೊಂದಿಗೆ ನನ್ನ ನೇರಸಂಪರ್ಕ ಇದ್ದಿರಲಿಲ್ಲ. ಆದರೂ ಅವರನ್ನು ನನ್ನ ಗುರು ಸಮಾನರೆಂದು ತಿಳಿದಿದ್ದೇನೆ. ವಿದ್ವತ್ತು, ಪರಿಶ್ರಮ, ಸಂಶೋಧನೆಗಳು ಕಣ್ಮರೆಯಾಗುತ್ತಿರುವ ಇಂದಿನ ದಿನಮಾನಗಳಲ್ಲಿ ಶ್ರೀಯುತರು ಇವೆಲ್ಲವುಗಳಿಗೆ ಆದರ್ಶ ಪ್ರಾಯವಾಗಿ ಕಿರಿಯರಿಗೆ ಮಾರ್ಗದರ್ಶಕರಾಗಿ ಬದುಕಿದರು. ಅವರ ಬಾಳು ಸಾರ್ಥಕ. ಅವರು ನಡೆದ ದಾರಿ ನನ್ನಂಥವರಿಗೆ ಸದಾ ಸ್ಫೂರ್ತಿಯ ಮಾರ್ಗದರ್ಶನ ನೀಡುವಂಥದು" ಎಂದಿದ್ದಾರೆ. ಒಟ್ಟನಲ್ಲಿ ಶ್ರೀ ದೇವೀರಪ್ಪನವರ ಬಗ್ಗೆ ಇವರು ಇಟ್ಟುಕೊಂಡಿದ್ದ ಪೂಜ್ಯತಾಭಾವವೇ ಇಂತಹ ಅಭಿಮಾನದಿಂದ ಪತ್ರ ಬರೆಯಲಿಕ್ಕೆ ಸ್ಫೂರ್ತಿ ನೀಡಿರುವಂತಹುದು.

***ಡಾ. ಬಿ.ಸಿ. ಜವಳಿ*** ಅವರು ೧೬.೧.೧೯೮೮ ರಲ್ಲಿ ಶ್ರೀನಾಗೇಶ್ ಅವರಿಗೆ ಪತ್ರ ಬರೆದು "ಶ್ರೀ ದೇವೀರಪ್ಪನವರು ನನ್ನ ಮಾವಂದಿರಾದ ಲಿಂಗೈಕ್ಯ ಮಲ್ಲಬಾದಿ ವೀರಭದ್ರಪ್ಪನವರ ಬಾಲ್ಯದ ಸ್ನೇಹಿತರು, ಅದರಿಂದಾಗಿ ನನಗೂ ಹಿರಿಯ ಮಿತ್ರರಾಗಿದ್ದರು. ನಾವು ಮೂವರೂ ಹರಿಹರ ಕವಿಯ ಭಕ್ತರು, ಹೀಗಾಗಿ ಬಂಧುಗಳು. ಅವರು ಹರಿಹರ ಕವಿಯ ಬಗೆಗೆ ಮಾಡಿದ ಸಂಶೋಧನೆ, ಪ್ರಕಟಿಸಿದ ಕೃತಿ, ತೋರಿದ ನಿಷ್ಠೆ ಅನುಪಮ. ಈ ಕಾಲದಲ್ಲೂ ಹರಿಹರ ಕವಿ, ಸಂಶೋಧನೆ, ಹಸ್ತಪ್ರತಿ ಅಭ್ಯಾಸ–ಇವುಗಳ ಬಗೆಗೆ ಅಧಿಕೃತವಾಗಿ ಮಾತನಾಡಬಲ್ಲವರಾಗಿದ್ದರು. ಎಲ್ಲಕ್ಕಿಂತಲೂ ಮಿಗಿಲಾಗಿ ಹಿರಿಯರಲ್ಲಿ ಭೇದಎಣಿಸದ ಸ್ನೇಹಿತರು".

ಕೃಷಿ ವಿಶ್ವವಿದ್ಯಾನಿಲಯ ಧಾರವಾಡ ಇಲ್ಲಿನ ಕುಲಪತಿಗಳಾಗಿದ್ದ ***ಡಾ.ಜೆ.ವಿ.ಗೌಡ*** ಅವರು ಶ್ರೀನಾಗೇಶ್ ಅವರ ಹೆಸರಿಗೆ ಬರೆದ ಪತ್ರದಲ್ಲಿ ಒಂದೇ ಸಾಲಿನಲ್ಲಿ ಹೀಗೆ ಹೇಳಿದ್ದಾರೆ : "ತಂದೆ ಎಂಬ ಮಹತ್ವದ ವ್ಯಕ್ತಿ, ಮಕ್ಕಳಿಗೆ ದೇವರಿಗಿಂತ ಹೆಚ್ಚು ಎಂದರೂ ತಪ್ಪಿಲ್ಲ. ಜೀವನದುದ್ದಕ್ಕೂ ಮಕ್ಕಳ ಹಿತಾಸಕ್ತಿಗಳ ಸಲುವಾಗಿ ಕಷ್ಟಪಟ್ಟಿರುತ್ತಾರೆ". ಬಾಲ್ಯದಲ್ಲಿ ತಾವು ಪಟ್ಟ ಕಷ್ಟದ ಪರಿಯನ್ನು ಅರಿತುಕೊಂಡೇ ದೇವೀರಪ್ಪನವರು ತಮ್ಮ ಮಕ್ಕಳಿಗೆ ಯಾವುದೇ ತೊಂದರೆಯಿಲ್ಲದೆ ವಿದ್ಯಾಭ್ಯಾಸ ಕೊಡಿಸುವಲ್ಲಿ ಅತ್ಯಂತ ಶ್ರಮವಹಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ಹೀಗೆ ದೇವೀರಪ್ಪನವರ ಬಗ್ಗೆ ಅನೇಕ ಮಹನೀಯರು, ಅಭಿಮಾನಿಗಳು, ಸಾಹಿತ್ಯ ಪ್ರೇಮಿಗಳು, ಸ್ನೇಹಿತರು, ಹಿತೈಷಿಗಳು ಮೊದಲಾದವರು ಪತ್ರ

ಮೂಲಕವೊ, ಲೇಖನಗಳ ಮೂಲಕವೊ, ಪುಸ್ತಕಗಳ ಮೂಲಕವೋ ತಮಗನ್ನಿಸಿದ್ದನ್ನು ನೇರವಾಗಿ, ಸ್ಪಷ್ಟವಾಗಿ, ದಿಟ್ಟವಾಗಿ ನಿರ್ಭಿಡೆಯಿಂದ ಹೇಳಿಕೊಂಡಿದ್ದಾರೆ. ದೇವೀರಪ್ಪನವರ ಬಗೆಗೆ ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ–ಗದಗ ಇವರು *'ಎಚ್. ದೇವೀರಪ್ಪನವರು'* ಎಂಬ ಕಿರುಪುಸ್ತಕವನ್ನು ಶ್ರೀ ಎಸ್.ಬಸವಾರಾಧ್ಯ ಇವರಿಂದ ಬರೆಯಿಸಿ ಪ್ರಕಟಗೊಳಿಸಿದೆ. ಈ ಕೃತಿಯಲ್ಲಿ ದೇವೀರಪ್ಪನವರ ಬಾಲ್ಯದಿಂದ ಹಿಡಿದು ಕಡೆಗಾಲದವರೆಗಿನ ಬದುಕಿನ ವಿವಿಧ ಮಜಲುಗಳ ಚಿತ್ರಣವಿದೆ. ದೇವೀರಪ್ಪನವರು ಬರೆದಿಟ್ಟಂತಹ ಹಲವಾರು ಘಟನೆ, ವಿವರಗಳ ಹಿನ್ನೆಲೆಯಲ್ಲಿ ಕೃತಿರಚನೆ ಮಾಡಲಾಗಿದೆ. ಈ ಕೃತಿಯಲ್ಲಿಯೂ ಸಹ ದೇವೀರಪ್ಪನವರು ನನಗೆ ಒದಗಿಸಿ ಕೊಟ್ಟಿದ್ದಂತಹ ಜೀವನ ವಿವರಗಳ ಮಾಹಿತಿ ಆಧಾರದಿಂದ ಇಂತಹದೊಂದು ಕೃತಿ ರಚನೆಗೆ ಸಾಧ್ಯವಾಗಿದೆ. ಶ್ರೀ ಎಸ್. ಬಸವಾರಾಧ್ಯರು ತಮ್ಮ ಕೃತಿಯಲ್ಲಿ ದೇವೀರಪ್ಪನವರ ಬಗ್ಗೆ 'ಅರಿಕೆ' ಯಲ್ಲಿ ಕೆಲವು ಅರ್ಥಪೂರ್ಣವಾದ ಮಾತುಗಳನ್ನು ಬರೆದಿದ್ದಾರೆ. "ಈ ಶತಮಾನದ ಹಿರಿಯ ಸಾಹಿತಿಗಳಲ್ಲಿ ಲಿಂ. ಹೆಚ್. ದೇವೀರಪ್ಪನವರು ಅತ್ಯಂತ ಪ್ರಮುಖರು. ಇಡೀ ಜೀವನವನ್ನು ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗಾಗಿಯೇ ಮೀಸಲಾಗಿಟ್ಟ ಮಹಾನುಭಾವರು. ಎಲೆಯ ಮರೆಯ ಕಾಯಿಯಂತೆ ನಿರಂತರವಾಗಿ ತಮ್ಮ ಸೇವೆಯನ್ನು ಸಲ್ಲಿಸಿ ಕೈಲಾಸವಾಸಿಗಳಾದರು. ಇವರ ವೈವಿಧ್ಯಮಯವಾದ ಬದುಕು ಬರಹವನ್ನು ಚಿತ್ರಿಸುವ ಸದವಕಾಶ ನನಗೆ ಪ್ರಾಪ್ತವಾದುದು ಒಂದು ಸುಕೃತವೆಂದೇ ಭಾವಿಸಿದ್ದೇನೆ.

ಲಿಂ. ಎಚ್. ದೇವೀರಪ್ಪನವರನ್ನು ತೀರ ಹತ್ತಿರದಿಂದ ನೋಡಿದವರಲ್ಲಿ ನಾನೂ ಒಬ್ಬ. ಶ್ರೀಯುತರು ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಸಹಾಯಕ ನಿರ್ದೇಶಕರಾಗಿದ್ದಾಗ, ನಾನು ಆ ಸಂಸ್ಥೆಯಲ್ಲಿ ಕನ್ನಡ ಪದವೀಧರ ತಜ್ಞನಾಗಿ ಮೊದಲು ಅವರು ನೇಮಕಗೊಂಡಿದ್ದ ಹುದ್ದೆಗೆ ಸೇರಿಕೊಂಡೆ. ಆ ಕಾಲದಲ್ಲಿ ಬೇರೆ ಹುದ್ದೆಗಳು ಲಭ್ಯವಾಗುತ್ತಿದ್ದರೂ ದೇವೀರಪ್ಪನವರು ನನ್ನನ್ನು ಎಲ್ಲಿಯೂ ಹೋಗದಂತೆ ಮನವೊಲಿಸಿದರು. ಪ್ರಾಚೀನ ಕಾವ್ಯಗಳ ಎಲ್ಲ ಸೌಲಭ್ಯಗಳನ್ನು ಒದಗಿಸಿದರು. ಅವರು ನನ್ನ ಮೇಲಧಿಕಾರಿಗಳು ಎಂಬ ಮನೋಭಾವವನ್ನು ಎಂದೂ ತೋರ್ಪಡಿಸಿದವರಲ್ಲ. ನನ್ನನ್ನು ಒಬ್ಬ ಕಿರಿಯ ಸೋದರನಂತೆ ಭಾವಿಸಿ ಮಾರ್ಗದರ್ಶನ ಮಾಡಿದರು. ಇಂದು ನಾನು ಮಾಡಿರುವ ಸಾಹಿತ್ಯ ಕೃತಿಗಳ ಸಂಪಾದನ ಕಾರ್ಯಗಳಿಗೆಲ್ಲ

ಅವರೇ ಪ್ರೇರಕರೂ, ಪೋಷಕರು".

ದೇವೀರಪ್ಪನವರು ತಾವೊಬ್ಬರೇ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ವಿವಿಧ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಲಿಲ್ಲ. ತಮ್ಮೊಂದಿಗೆ ಅನೇಕರನ್ನು ಅಲ್ಲಿನ ಕಾರ್ಯದಲ್ಲಿ ತೊಡಗಿಸಿಕೊಂಡರು ; ಅವರಿಗೆ ಅದರ ಸವಿಯುಣ ಬಡಿಸಿದರು; ಹಸ್ತ ಪ್ರತಿಗಳ ಸಂಗ್ರಹಣೆ, ಅಧ್ಯಯನ, ಮೌಲಿಕ ಕೃತಿಗಳ ಪ್ರಕಟಣೆ, ಮಾರ್ಗದರ್ಶನ ನೀಡಿ ಅವರ ನೇತಾರರಾದರು. ಹಾಗಾಗಿ ಎನ್. ಬಸವಾರಾಧ್ಯರಂಥ ವಿದ್ವಾಂಸರು ದೇವೀರಪ್ಪನವರು ತೋರಿದ ದಾರಿಯಲ್ಲಿ ಮುನ್ನಡೆಯಲು ಸಾಧ್ಯವಾಯಿತು ; ಸ್ಮರಿಸಿಕೊಳ್ಳಲು ಅವಕಾಶ ಒದಗಿ ಬಂದಿತು.

ದೇವೀರಪ್ಪನವರಿಗೆ ಹತ್ತಿರದಲ್ಲಿದ್ದ ಪಂಡಿತ ಚನ್ನಪ್ಪ ಎರೇಸೀಮೆ ಅವರು ಹಲವಾರು ವರ್ಷಗಳ ಕಾಲ ಜೊತೆಗೆ ಕಾಲಹಾಕಿದವರು. ದೇವೀರಪ್ಪನವರು ನಿಧನರಾದ ಸಂದರ್ಭದಲ್ಲಿ ಅತ್ಯಂತ ಭಾವುಕರಾಗಿ ಹೇಳಿದ ಮಾತುಗಳು ಕಟು ಸತ್ಯವನ್ನು ಹೊರಚೆಲ್ಲುತ್ತವೆ. "ನಿವೃತ್ತಿಯ ಕಾಲ ಸಮೀಪಿಸುತ್ತಿದ್ದಂತೆ ಪ್ರಾಚ್ಯ ವಿದ್ಯಾ ಸಂಶೋಧನಾಲಯವನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸುವ ವಿಚಾರದಲ್ಲಿ ದೇವೀರಪ್ಪನವರು ವಿವಾದದ ಸುಳಿಗೆ ಸಿಕ್ಕು ನಿಷ್ಠುರ ಕಟ್ಟಿಕೊಳ್ಳಬೇಕಾಯಿತು. ಇದು ಅವರ ಬಹುದೊಡ್ಡ ನೋವಿನ ಪ್ರಸಂಗವೇ ಆಯಿತು. ಇವರ ವಾದವಿಷ್ಟೆ. ಪ್ರಾಚ್ಯ ಸಂಶೋಧನಾಲಯ ಹಿಂದೆಯೂ ಸರಕಾರದ್ದು ಮುಂದೆಯೂ ಈ ಸಂಸ್ಥೆಯನ್ನು ಸರಕಾರವೇ ತನ್ನ ಹಿಡಿತದಲ್ಲಿಟ್ಟುಕೊಂಡು ಹೆಸರಾಂತ ವಿದ್ವಾಂಸರಿಂದ ಇಲ್ಲಿ ಸಂಶೋಧನ ಕಾರ್ಯವನ್ನು ಮಾಡಿಸಬೇಕೆಂಬುದಾಗಿತ್ತು. ಈ ವಿವಾದದಲ್ಲಿ ಯೂನಿವರ್ಸಿಟಿಯ ಅನೇಕ ಮುಖಂಡರ ವಿರೋಧ ಕಟ್ಟಿಕೊಂಡು ಸ್ವತಃ ತಾವೇ ತಮ್ಮ ಹಣ ಖರ್ಚು ಮಾಡಿ ಕೋರ್ಟ್ ಕಟ್ಟೆ ಹತ್ತಿ, ರಿಟ್ ಅರ್ಜಿ ಸಲ್ಲಿಸಿ ವಿಫಲರಾದರು. ಕೊನೆಗೆ ನಿವೃತ್ತರಾದ ಮೇಲೆ ಮೈಸೂರನ್ನೇ ತ್ಯಜಿಸಿ ಅಲ್ಲಿನ ಮನೆ ಮಾರಿ ಬೆಂಗಳೂರಿನಲ್ಲಿ ತಮ್ಮ ಕುಟುಂಬದ ನೆತ್ತಿಗೊಂದು ಸೂರು ಮಾಡಿಕೊಂಡು ಇದ್ದಷ್ಟು ಕಾಲ ನೆಮ್ಮದಿಯಿಂದ ಇದ್ದು ೩.೧.೧೯೮೮ ರಂದು ಈ ಪ್ರಬುದ್ಧ ಜೀವ ಕೊನೆಯುಸಿರೆಳೆಯಿತು. ಮರಣಕ್ಕೆ ಎಳೆಂಟು ದಿನಗಳ ಮುನ್ನ ನನ್ನೊಡನೆ, ನನಗೆ ಮರಣ ಈಗಲೇ ಸಂಭವಿಸುವು ದಿಲ್ಲವೆಂದೂ ಬೇಗನೆ ಬಸವಣ್ಣನವರ ವಚನ ಸಂಸ್ಕರಣ ಕಾರ್ಯವನ್ನು ಮುಗಿಸಿಯೇ ಸಾಯುತ್ತೇನೆಂದು ಬಹು ಆತ್ಮ ವಿಶ್ವಾಸದಿಂದ ಹೇಳಿದ್ದರು. ಆದರೆ ಶಿವನಿಚ್ಛೆ ಬೇರೆಯೇ ಆಗಿತ್ತು.

ದೇವೀರಪ್ಪನವರು ಆರ್ಥಿಕವಾಗಿ ಗಣನೀಯರಾಗಿರದಿದ್ದರೂ ಬಡತನವನ್ನೇನೂ ಅನುಭವಿಸಿದವರಲ್ಲ. ಕೊನೆಯ ಘಳಿಗೆಯವರೆಗೂ ಲೆಕ್ಕಣಿಕೆಗೆ ವಿರಾಮ ಕೊಡದೆ ದುಡಿದು ಸಂಪಾದಿಸಿದರು. ಹರಿಹರ ಮಹಾಕವಿಯ ಕೆಚ್ಚು-ನೆಚ್ಚುಗಳು ಇವರ ಮೈಮನಗಳಲ್ಲಿ ತುಂಬಿಕೊಂಡಿದ್ದರಿಂದಲೋ ಏನೋ 'ಮತಿಗೆಟ್ಟು ಅನ್ಯರ ಹೊಗಳದಂತೆ ಧೃತಿಗೆಟ್ಟು ಅನ್ಯರ ಬೇಡದಂತೆ' ಮಾನವನ್ನಿರಿಸಿಕೊಂಡು ಸಾರ್ಥಕ ಬಾಳನ್ನು ಬಾಳಿದ ಈ ಧೀಮಂತ ವ್ಯಕ್ತಿಯನ್ನು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಸ್ಥಾನವಾಗಲಿ, ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪದವಿಯಾಗಲಿ ಮುಖ ತಿರುಗಿಸಿ ನೋಡದೇ ಇದ್ದದ್ದು ಕಾಲ ಮಹಿಮೆ ಏನೋ" ('ಪ್ರಸಾದ' ಸಂಪುಟ ೨೬ : ಸಂಚಿಕೆ ३ : ಪುಟ ३೦-३೧ ; ಮೇ-ಜೂನ್ : ೧೯೮೮)

**ಕುಟುಂಬ ವರ್ಗದ ಸಂತಾಪ :**

ದೇವೀರಪ್ಪನವರ ಬಗ್ಗೆ ಅವರ ಕುಟುಂಬ ವರ್ಗ ಬಹಳಷ್ಟು ಆತ್ಮೀಯವಾಗಿ ನೆನೆಸಿಕೊಂಡಿರುವಂತೆಯೇ ಅವರ ಅಳಿಯ, ಮಕ್ಕಳು ತಾವು ಕಂಡ ಬಗೆಯನ್ನು ಹಲವಾರು ಬಗೆಯಲ್ಲಿ ಸದಾ ಹೇಳುತ್ತಿರುತ್ತಾರೆ. ದೇವೀರಪ್ಪನವರ ಮನೆಯೇ ಒಂದು ಸಾಹಿತ್ಯಿಕ, ಸಂಶೋಧನಾತ್ಮಕ ವಾತಾವರಣವನ್ನು ನಿರ್ಮಿಸಿಕೊಂಡಂತಹ ಕೇಂದ್ರ. ಎಲ್ಲ ಮಕ್ಕಳು ತಂದೆಯ ಬಗೆಗೆ ಸಾಹಿತ್ಯದ ಸೊಗಡನ್ನಿಟ್ಟುಕೊಂಡೇ ಮಾತನಾಡಬಲ್ಲರು. ತಂದೆಯೊಡನೆ ಓಲೆಗರಿಯೊಂದಿಗೆ ಒಡನಾಟವನ್ನಿಟ್ಟುಕೊಂಡು ಸಹಕರಿಸಿದ ಎಚ್.ಡಿ. ಗೀತಾ, ಎಚ್.ಡಿ. ಗೌರು ಹಾಗೂ ಎಚ್.ಡಿ. ಶಾಂತ ಮೂರು ಜನರೂ ಒಂದಲ್ಲ ಒಂದು ಬಗೆಯಲ್ಲಿ ದೇವೀರಪ್ಪನವರ ಸಾಹಿತ್ಯಿಕ ಕೃಷಿಯಲ್ಲಿ ಭಾಗಿಗಳಾಗಿದ್ದಾರೆ. ಪ್ರತಿ ಮಾಡಿಕೊಡಲು ನೆರವಾಗಿದ್ದಾರೆ. ಅಳಿಯಂದಿರಾದ ಡಾ. ಪಿ.ಬಸಪ್ಪನವರೂ ಸಹ ಮಾವನವರ ಬಗ್ಗೆ ಒಳ್ಳೆಯ ಸಂಬಂಧ, ಅಭಿಮಾನ ಹಾಗೂ ಆದರ್ಶಗಳನ್ನಿಟ್ಟುಕೊಂಡವರಾಗಿದ್ದಾರೆ. ಹಾಗಾಗಿ ಇವರೆಲ್ಲರ ಮಾತುಗಳನ್ನು ಗಮನಿಸಿದಾಗ ದೇವೀರಪ್ಪನವರ ಬದುಕಿನ ಅನೇಕ ಸಂಗತಿಗಳು ನಮಗೆ ಆಶ್ಚರ್ಯವನ್ನುಂಟುಮಾಡುತ್ತವೆ.

*ಎಚ್.ಡಿ. ಗೀತಾ* ದೇವೀರಪ್ಪನವರ ಹಿರಿಯ ಮಗಳು. ಇವರು ಅಪ್ಪನ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ : "ನಮ್ಮ ತಂದೆಯವರು 'ಅಪ್ಪ' ಎಂಬ ಹೆಸರಿಗೆ ಅನ್ವರ್ಥವಾಗಿದ್ದರು. ನಮ್ಮನ್ನು ಸುಸಂಸ್ಕೃತ, ವಾತ್ಸಲ್ಯಮಯ ವಾತಾವರಣದಲ್ಲಿ ಬೆಳೆಸಿದರು. ಪ್ರೀತಿಗೆ, ಮಾರ್ಗದರ್ಶನಕ್ಕೆ ಎಂದೂ ಕೊರತೆ

ಇರಲಿಲ್ಲ. ತಾವು ಸಂಸ್ಕೃತ ಕಲಿಯಲಾರದ್ದಕ್ಕೆ ನನಗೆ ಸಂಸ್ಕೃತ ಕಲಿಸಿದರು. ನನ್ನ ತಂಗಿ ಶಾಂತಾ ಹಿಂದಿಯಲ್ಲಿ ಪಾರಂಗತೆ. ಇನ್ನೊಬ್ಬ ತಂಗಿ ಗೌರು ಬಿಎಸ್ಸಿ ಪಧವೀಧರೆ. ನನ್ನ ತಮ್ಮ ಶ್ರೀ ನಾಗೇಶ್ ಇಂಜಿನಿಯರ್ ಪದವೀಧರ. ನಮ್ಮ ವಿದ್ಯೆ, ಅಭಿರುಚಿ, ಸಂಸ್ಕಾರ ಎಲ್ಲವೂ ಅವರಿಂದ ನಮಗೆ ಸಿಕ್ಕ ಅಮೂಲ್ಯ ಉಡುಗೊರೆ.



ಎಚ್.ಡಿ. ಶಾಂತ, ಎಚ್.ಡಿ. ಗೌರು, ರುದ್ರಮ್ಮ, ದೇವೀರಪ್ಪ ಅಳಿಯ ನಾಗಭೂಷಣ

ತಮ್ಮ ವಿದ್ಯಾಭ್ಯಾಸಕ್ಕೆ ಎಷ್ಟು ತೊಂದರೆಯನ್ನನುಭವಿಸಿದ್ದರೋ ಏನೋ? ನಾವು ನಾಲ್ವರಿಗೂ ಒಳ್ಳೆಯ ವಿದ್ಯೆ ಕೊಡಿಸಿದರು. ಅದಕ್ಕಿಂತ ದೊಡ್ಡ ಆಸ್ತಿ ಬೇಕೆ ? ಓಲೆಗರಿಗಳಲ್ಲಿರುವ ಗ್ರಂಥಗಳನ್ನು ಪ್ರತಿ ಮಾಡಲು ನನಗೆ ಅನೇಕ ವೇಳೆ ವಹಿಸುತ್ತಿದ್ದರು. ಕನ್ನಡ ಸಾಹಿತ್ಯದ ಪರಿಚಯ ಆದದ್ದೇ ಅವರಿಂದ. ಅನೇಕ ಉತ್ತಮ ವಾಗ್ಮಿಗಳ ಭಾಷಣ ಕೇಳಿಸುತ್ತಿದ್ದರು (ವಿ.ಸೀ., ಟಿ.ಎನ್.ಎಸ್) ಸಂಶೋಧನಾ ರಂಗದಲ್ಲಿ ಅವರು ಮಾಡಿರುವ ಕೆಲಸ ಅಮೋಘವಾದುದು. ಹಾಗೂ ಕನ್ನಡ ಎಂಎ ವಿದ್ಯಾರ್ಥಿಗಳಿಗಂತೂ ಅವರ ಸಂಶೋಧನೆಗಳು ಉತ್ತಮ ಕರಾರುವಾಕ್ ಆಧಾರಗಳು. ಆದರೂ ಎಲೆಮರೆಯ ಕಾಯಿಯ ಹಾಗೆ ಉಳಿದರು. ಸರ್ಕಾರದಿಂದಾಗಲಿ ಅಥವಾ ಇತರರಿಂದಾಗಲೀ ನೀಡಬೇಕಾದ ಅಥವಾ ದೊರಕಬೇಕಾದ ಮನ್ನಣೆ ಸಿಗಲಿಲ್ಲ.

ತಮ್ಮ ಹುಟ್ಟೂರಿಗೆ ಏನಾದರೂ ಸೇವೆ ಮಾಡಬೇಕೆಂಬ ಹಂಬಲವಿತ್ತೇನೋ ಅವರಿಗೆ. ಆದರೆ ಅದು ಈಡೇರಲಿಲ್ಲ. ವಿದ್ಯಾರ್ಥಿ ಜೀವನದಲ್ಲೇ ತಮ್ಮೂರ ಬಗ್ಗೆ ಕೊಂಚವಾದರೂ ಪ್ರಗತಿ ತರಲು ಶ್ರಮಿಸಿದ್ದರು. ಪರರ ನೋವಿಗೆ

ಬಹಳವಾಗಿ ಸ್ಪಂದಿಸುತ್ತಿದ್ದರು. ಸಾಹಿತ್ಯ ಕೃಷಿ ಅವರಿಗೆ ಬಹು ಪ್ರಿಯವಾಗಿತ್ತು. ನಿವೃತ್ತಿಯಾದ ಮೇಲೇ ಸಾಕಷ್ಟು ಸಂಶೋಧನೆ ಬರವಣಿಗೆ ಮಾಡಿದರು. ಇನ್ನೂ ಅನೇಕ ಕೃತಿಗಳು ಅವರಿಂದ ಹೊರಬರುತ್ತಿದ್ದುವೇನೋ. ಆದರೆ ನಮ್ಮ ಪುಣ್ಯ ಇಷ್ಟೇ ಆಗಿ ಹೋಯಿತು".

ದೇವೀರಪ್ಪನವರ ಎರಡನೆಯ ಮಗಳು **ಎಚ್.ಡಿ. ಶಾಂತಾ.** ದೇವೀರಪ್ಪನವರಂತೆಯೇ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ಅಪಾರವಾಗಿ ತೊಡಗಿಸಿಕೊಂಡವರು. ಹಿಂದಿ ಪದವೀಧರರಾಗಿದ್ದಾರೆ ಎಂಬುದಕ್ಕಷ್ಟೇ ಇವರನ್ನು ಇಲ್ಲಿ ಸ್ಮರಿಸಲಾಗದು. ಪ್ರೇಮಚಂದರ ಕೃತಿ 'ಕಾದಂಬರಿ'ಯನ್ನು ಹಿಂದಿಯಿಂದ ಕನ್ನಡಕ್ಕೆ 'ಕಾದಂಬರಿ' ಎಂಬ ಹೆಸರಿನಲ್ಲಿಯೇ ಅನುವಾದಿಸಿ ಪ್ರಕಟಿಸಿದ್ದಾರೆ. ಇದು ಆರುನೂರು ಪುಟಗಳ ಬೃಹತ್ ಕಾದಂಬರಿ. ಹಿಂದಿ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ, ಸಹಾಯಕ ನಿರ್ದೇಶಕರಾಗಿ ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುತ್ತಲೇ ಇಂತಹದೊಂದು ಅಪರೂಪದ ಅನುವಾದ ಕೆಲಸ ಮಾಡಿ ಕನ್ನಡ ಸಾಹಿತ್ಯಕ್ಕೆ ಚಿರಪರಿಚಿತರಾಗಿದ್ದಾರೆ. ಇವರು ತಮ್ಮ ತಂದೆಯ ಬಗೆಗೆ ಇಟ್ಟಿರುವ ಪ್ರೀತಿ, ಮಮತೆ ಅಭಿಮಾನಗಳು ಇತರರಿಗೆ ಆದರಣೀಯ. ಯಾವುದೇ ಸಂಕೋಚವಿಲ್ಲದೆ ಮಗಳು ಎಂಬ ಮಮಕಾರವಿಲ್ಲದೆ ದೇವೀರಪ್ಪನವರ ಬಗ್ಗೆ ಅದೂ ಸಂಶೋಧಕರ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ:

"ನಮ್ಮ ತಂದೆ 'ಹೆಚ್ ದೇವೀರಪ್ಪ' ನವರು ಎಂದು ಹೇಳಿಕೊಳ್ಳುವುದಕ್ಕೆ ನನಗೆ ಬಹಳ ಹೆಮ್ಮೆಯೆನಿಸುತ್ತದೆ. ಆಧುನಿಕ ಕನ್ನಡ ಸಾಹಿತ್ಯಕ್ಕೆ, ಶರಣ ಸಾಹಿತ್ಯಕ್ಕೆ ಅತ್ಯಮೂಲ್ಯ ಕೊಡುಗೆಗಳನ್ನಿತ್ತ ಸಾಹಿತ್ಯ ಸಂಶೋಧಕರೂ, ಸೃಜನಾತ್ಮಕ ಸಾಹಿತ್ಯ ಕ್ಷೇತ್ರದಲ್ಲಿ ಉತ್ತಮ ಕೃತಿಗಳನ್ನು ರಚಿಸಿದವರೂ ಆದ ದೇವೀರಪ್ಪನವರು ನನಗೆ ಅತ್ಯಂತ ಸಹೃದಯತೆಯುಳ್ಳ ತಂದೆಯಾಗಿದ್ದರು. ಅವರು ಹುಟ್ಟಿಬಂದ ಪರಿಸರವನ್ನು ಕಡೆಯತನಕವೂ ಮರೆಯಲಿಲ್ಲ. ಗ್ರಾಮೀಣ ಬದುಕಿಗೆ ತುಡಿಯುತ್ತಿದ್ದ ಹಂಬಲವೇ 'ಬೆಳುವಲದ ಮಡಿಲಲ್ಲಿ' ಎಂಬ ರೈತನ ಬದುಕನ್ನಾಧರಿಸಿದ ಕಾದಂಬರಿಗೆ ಕಾರಣವಾಯಿತು. 'ಹಳ್ಳಿಯ ಬದುಕಿ'ನ ವಿಶಾಲವಾದ ಹರಹು ಅವರ ಕೃತಿ ರಚನೆಗೆ ಭೂಮಿಕೆಯಾಯಿತು.

ವೈಯುಕ್ತಿಕ ಜೀವನದಲ್ಲಿ ಸರಳತೆ ಹಾಸು ಹೊಕ್ಕಾಗಿತ್ತು. ಆಳವಾದ ಅಗಾಧ ಪಾಂಡಿತ್ಯ ಗಳಿಸಿದ್ದರೂ ಸಹ ಅವರೊಂದಿಗೆ ಸಾಹಿತ್ಯದ ಬಗ್ಗೆ ಚರ್ಚೆಗಿಳಿಯುವವರೊಂದಿಗೆ ಸಮಾಧಾನದಿಂದ ಮೇಲು ಕೀಳೆಂಬ ಭೇದವೆಣಿಸದೆ ಮಾತನಾಡುತ್ತಿದ್ದರು. 'ಹರಿಹರ' ಅವರ ಪ್ರೇಮಕವಿ. ಹರಿಹರನ ವ್ಯಕ್ತಿತ್ವನ್ನಾಧರಿಸಿ ಬರೆದ 'ತುಂಗಭದ್ರ' ಸೊಗಸಾದ ರಂಗನಾಟಕವಾಗಿ

ಮೂಡಿಬಂದಿದೆ. ಯಾವ ವಿಷಯವನ್ನೇ ಆಗಲಿ ಅದರ ಆಳವಾದ ಅಧ್ಯಯನ, ತೀಕ್ಷ್ಣವಾದ ಸಂಶೋಧನಾ ದೃಷ್ಟಿ, ವೈಜ್ಞಾನಿಕ ವಿಶ್ಲೇಷಣೆಗಳಿಲ್ಲದೆ ಪ್ರಸ್ತುತಪಡಿಸುತ್ತಿರಲಿಲ್ಲ. ಪ್ರಾಚೀನ ಗ್ರಂಥಗಳನ್ನು ಸಂಪಾದಿಸುವಾಗ ಅವರ ಪಾಠಾಂತರಗಳಲ್ಲಿ ನಿಜವಾದುದುರ ಬಗ್ಗೆ ಅವರ ಅಭಿಪ್ರಾಯ ನಿಖರತೆ, ನಿಸ್ಪೃಹತೆಗಳು ಪ್ರಶಂಸಾರ್ಹವಾಗಿವೆ. ಅಗಾಧ ಪಾಂಡಿತ್ಯ ಪ್ರಪಂಚದಲ್ಲಿ ಪ್ರಕಾಶಿಸುತ್ತಿದ್ದಾಗ್ಯೂ ನಮ್ಮ ತಂದೆಯವರ ಹಳ್ಳಿಯ ಬದುಕಿನ ಒಲವು ಬತ್ತದ ಒರತೆಯಾಗಿತ್ತು. ಕರಿದ ತಿಂಡಿ ತಿನಿಸುಗಳಿಗಿಂತ ರೊಟ್ಟಿ, ಮುದ್ದೆಯಂತಹ ಹಳ್ಳಿ ತಿನಿಸುಗಳು ಅವರಿಗೆ ಅತ್ಯಂತ ಪ್ರಿಯವಾಗಿರುತ್ತಿತ್ತು.

ಬಾಲ್ಯದಲ್ಲಿ ಒಂದು ಸಣ್ಣ ಘಟನೆಯಿಂದಾಗಿ ಅವರ ಬಲಗೈ ನೇಗಿಲು ಹೊಡೆಯುವುದಕ್ಕೆ ಸಹಕರಿಸದೇ ಹೋದ ಕಾರಣ ವಿದ್ಯಾಭ್ಯಾಸಕ್ಕೆ ಅವರು ಮನಸ್ಸು ಕೊಟ್ಟರು. ಇಲ್ಲದಿದ್ದಲ್ಲಿ ಅವರು ಬಹುಶಃ ರೈತರಾಗಿಯೇ ಉಳಿಯುತ್ತಿದ್ದರೇನೋ. ಅವರ ನರನಾಡಿಗಳಲ್ಲಿ ಹರಿಯುತ್ತಿದ್ದ ರೈತನ ಮಣ್ಣಿನ ಪ್ರೀತಿ 'ಬೆಳುವಲದ ಮಡಿಲಲ್ಲಿ' ಕಾದಂಬರಿಯಲ್ಲಿ ವಿಸ್ತಾರವಾಗಿ ವ್ಯಕ್ತವಾಗಿದೆ. ನೇಗಿಲು ಹೂಡುವ ರೀತಿ, ದನಕರುಗಳ ಬಗೆಗಿನ ಪ್ರೀತಿ, ಹಳ್ಳಿಯ ಜೀವನದ ಸೊಗಸನ್ನೂ, ಚಿಂತೆ ಬವಣೆಗಳನ್ನೂ ಪದರು ಪದರಾಗಿ ವರ್ಣಿಸಿರುವ ರೀತಿ ಹಳ್ಳಿಯ ಬದುಕಿನಲ್ಲಿ ಅವರ ಹೃದಯವನ್ನೇ ತೆರೆದಿಟ್ಟಂತೆ ಇದೆ.

ಮಕ್ಕಳಾದ ನಮ್ಮ ನಾಲ್ವರ ಬಗ್ಗೆ ಒಂದು ದಿನವೂ ಒರಟಾಗಿ ಅಥವಾ ಕಟುವಾದ ಶಬ್ದಗಳನ್ನು ಬಳಸಿ ಮಾತನಾಡುತ್ತಿರಲಿಲ್ಲ. ಅವರ ಅತಿಯಾದ ಸೌಜನ್ಯತೆ ಅನೇಕಬಾರಿ ಅವರ ಸಾಹಿತ್ಯದ ಸಾಧನೆಗೆ ಅಡ್ಡಿಯಾಗಿದ್ದುದುಂಟು. ಶಿವಕೊಟ್ಟುದುದರಲ್ಲಿ ತೃಪ್ತಿಯಿಂದ ಜೀವನ ನಡೆಸಬೇಕೆಂಬುದು ಅವರ ಜೀವನದ ಆದರ್ಶವಾಗಿತ್ತು. ಶರಣರ ಬಾಳಿನಂತೆ ಬಾಳಿದ ನಮ್ಮ ತಂದೆಯವರ ಬದುಕು ನಿಜಕ್ಕೂ ಅನುಕರಣೀಯವೆನ್ನಿಸುತ್ತದೆ. ಅವರು ಶಿವಶರಣರ ಬಗ್ಗೆ ಕೃತಿರಚನೆ ಮಾಡುವಾಗ, ಅತ್ಯಂತ ಭಕ್ತಿಸ್ವಭಾವದಿಂದ ಪೂಜಾಕೈಂಕರ್ಯದ ಭಾವನೆಯಿಂದ ಬರವಣಿಗೆಗೆ ತೊಡಗುತ್ತಿದ್ದರು. ಶರಣರ ಬಗ್ಗೆ ಸಾಕಷ್ಟು ಚಿಂತನೆ ಮಾಡಿ ಅವರು ನಡೆದ ದಾರಿಯೂ ಬದುಕಿದ ಬಗೆಯೂ ಶರಣರದೇ ಆಗಿತ್ತು. ಹರಿಹರನಿಗೆ ಶಿವನ ಬಗೆಗಿದ್ದ ಭಕ್ತಿಯ ಉತ್ಕಟತೆಯೇ ನಮ್ಮ ತಂದೆಯವರಿಗೆ ಕವೀಶ್ವರ ಹರಿಹರನ ಬಗೆಗೆ ಇತ್ತು. ಇದೇ ಕಾರಣಕ್ಕಾಗಿ. ಬೆಂಗಳೂರಿನಲ್ಲಿ ಕಟ್ಟಿಸಿಕೊಂಡಂತಹ ಸ್ವಗೃಹಕ್ಕೆ ಅವರು 'ಹರಿಹರ' ಎಂದೇ ಹೆಸರಿಟ್ಟಿದ್ದಾರೆ. ಅದೇನು ಕಾಕತಾಳೀಯವೋ ಏನೋ ದೇವೀರಪ್ಪನವರ ಶರಣಚೈತನ್ಯದಿಂದಲೋ.

ಬಾಳಿದ ಪುಣ್ಯದಿಂದಲೋ ಅವರು ವಾಸಿಸುತ್ತಿದ್ದ ಮನೆಯ ಸುತ್ತಲ ಜನವಸತಿ ಪ್ರದೇಶಕ್ಕೆ 'ವಿಜಯನಗರ' 'ಹಂಪಿನಗರ' ಎಂದು ಮಹಾನಗರ ಪಾಲಿಕೆ ಹೆಸರಿಟ್ಟಿರುವುದು ಆಶ್ಚರ್ಯವಲ್ಲವೆ?

ಗ್ರಂಥ ಸಂಪಾದನೆಯ ಬಗ್ಗೆ ತಮ್ಮ ಗುರುಗಳಾದ ಡಿ.ಎಲ್. ನರಸಿಂಹಚಾರ್ಯರು, ತೀ.ನಂ. ಶ್ರೀಕಂಠಯ್ಯನವರು ಇವರ ಮಾರ್ಗದರ್ಶನವನ್ನು ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತಿದ್ದರು. ಅವರ ಗುರುಭಕ್ತಿ ಅಪಾರ, ಶ್ರದ್ಧೆಯ ಪರಮಾವದಿ ಭಕ್ತಿ ಎಂದು ಅನೇಕ ಸಲ ಅವರ ಜೀವನವನ್ನು ಹತ್ತಿರದಿಂದ ನೋಡಿದ ನನಗೆ ಅನ್ನಿಸುತ್ತಿತ್ತು.

ಅನೇಕ ವಿಶ್ವವಿದ್ಯಾನಿಲಯಗಳಿಂದ 'ಹಿರಿಯ ಸಾಹಿತ್ಯ ಸಂಶೋಧಕ' ಎಂದು ಕರೆಯಲ್ಪಟ್ಟಿದ್ದರೂ ಸಹ 'ವಿದ್ಯೆಗೆ ವಿನಯವೇ ಭೂಷಣ' ಎಂಬ ಹೇಳಿಕೆಯನ್ನು ಇವರು ಸಾರ್ಥಕಪಡಿಸಿದರು. ಮನೆಯಲ್ಲಿ ಅಡಿಗೆ ತಿಂಡಿಗಳಲ್ಲಿ ರುಚಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಆದರೂ ಸಹ ಅದರ ಬಗ್ಗೆ ಅವರು ಅಸಹನೆ ವ್ಯಕ್ತಪಡಿಸುತ್ತಿರಲಿಲ್ಲ. ಈ ಸಹನಾಶೀಲತೆಯಿಂದಾಗಿ ವೃತ್ತಿ ಜೀವನದಲ್ಲಿ ಅನೇಕಬಾರಿ ಅವರು ಪೆಟ್ಟು ತಿಂದರು ಎಂಬ ವಿಷಯದಲ್ಲಿ ಸಂದೇಹವಿಲ್ಲ. ಮಹಾನಿಗರ್ವಿ, ಉತ್ಕೃಷ್ಟ ಸಂಶೋಧಕ, ಆಧುನಿಕ ಕಾಲ ಕಂಡ ಶಿವಶರಣರು ದೇವೀರಪ್ಪನವರು."

ದೇವೀರಪ್ಪನವರ ಮೂರನೆಯ ಮಗಳಾದ ಗೌರಮ್ಮ. ಇವರನ್ನು ಪ್ರೀತಿಯಿಂದ ಗೌರು ಎಂತಲೇ ಕರೆಯುತ್ತಿದ್ದರು. ಬಿಎಸ್ಸಿ ಪದವೀಧರೆಯಾಗಿರುವ ಇವರು ಕಾರ್ಪೋರೇಷನ್ ಬ್ಯಾಂಕಿನಲ್ಲಿ ಕೆಲಸ ನಿರ್ವಹಿಸಿ ಸ್ವಯಂ ಇಚ್ಛಾನಿವೃತ್ತಿ ಪಡೆದುಕೊಂಡಿದ್ದಾರೆ. ತಮ್ಮ ತಂದೆಯ ಬಗ್ಗೆ ತುಂಬು ಅಭಿಮಾನದಿಂದ ಹೇಳಿಕೊಳ್ಳುವ ಇವರು "ನಮ್ಮ ತಂದೆ ಹಳ್ಳಿಯ ಬದುಕನ್ನು ತಮ್ಮ ಬಾಳಿನುದ್ದಕ್ಕೂ ಮೈಗೂಡಿಸಿಕೊಂಡೇ ಬಂದರು. ನಮ್ಮ ಅಜ್ಜ ಮತ್ತು ಅಜ್ಜಿಯವರು ಪಡುತ್ತಿದ್ದ ಕಷ್ಟ, ಹೊಲ ಮನೆಗಳಲ್ಲಿ ದುಡಿಯುತ್ತಿದ್ದ ರೀತಿ ಅವರ ಮೇಲೆ ಅಗಾಧ ಪ್ರಭಾವ ಬೀರಿದ್ದವು. ಓದುವ ಹಂಬಲ ಇದ್ದದ್ದರಿಂದ ನಮ್ಮ ಮನೆತನದಲ್ಲಿ ಮೊಟ್ಟಮೊದಲ ಅಕ್ಷರಸ್ಥರಾಗಿದ್ದು, ನಮ್ಮಗಳಿಗೆಲ್ಲಾ ಅನುಕೂಲವೇ ಆಯಿತು. ಇಲ್ಲದೇ ಹೋಗಿದ್ದಲ್ಲಿ ನಾವೂ ಹಳ್ಳಿಯ ಬದುಕಿನಲ್ಲಿ ಹಾಗೇ ಇರುತ್ತಿದ್ದೆವೋ ಏನೋ. ನಾವು ನಾಲ್ವರನ್ನು ಅಪ್ಪ ಓದಿಸಿದ ಬಗೆ ಎಂದೆಂದಿಗೂ ಮರೆಯಲಾಗದ್ದು. 'ಹೆಣ್ಣೊಂದು ಕಲಿತರೆ ಮನೆಯೇ ಕಲಿತಂತೆ' ಎಂಬ ಗಾದೆ ಅಪ್ಪನ ವಿಚಾರದಲ್ಲಿ ಬೇರೆಯೇ ಆಯಿತು. ಹಾಗಾಗಿ ನಾವುಗಳೆಲ್ಲಾ ವಿದ್ಯಾವಂತರಾದೆವು. ಅಪ್ಪನ ಸಾಹಿತ್ಯ ಕೃಷಿಗಳಲ್ಲಿ

ನಮ್ಮ ಸಹಕಾರವನ್ನು ನೀಡಿದೆವು. ಅಕ್ಕ ಗೀತಾ ಹಸ್ತಪ್ರತಿಗಳನ್ನು ಓದಿ ಪ್ರತಿ ಮಾಡುವ ಕೆಲಸ ಮಾಡುತ್ತಾ ನೆರವಾದರು. ನಮ್ಮೆಲ್ಲರಿಗೂ ಸಾಹಿತ್ಯದ ಅಭಿರುಚಿ ಬೆಳೆಸಿದ ನಮ್ಮ ತಂದೆಯವರನ್ನು ನಾವು ಮರೆಯಲು ಸಾಧ್ಯವಿಲ್ಲ."

**ಎಚ್.ಡಿ. ಶ್ರೀನಾಗೇಶ** ದೇವೀರಪ್ಪನವರ ಕೊನೆಯ ಮಗ. ಮೂವರು ಅಕ್ಕಂದಿರ ಮಧ್ಯೆದಲ್ಲಿ ಬೆಳೆದ ಇವರು ಇಂಜಿನಿಯರ್ ಪದವೀಧರರಾಗಿ ಕೆಇಬಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ದೇವೀರಪ್ಪನವರಿಗೆ ಇವರನ್ನು ಕಂಡರೆ ಬಹಳಷ್ಟು ಪ್ರೀತಿ, ಮಮತೆ ಜಾಸ್ತಿ. ತಂದೆಗೆ ತಕ್ಕಂತೆಯೇ ಬಾಳನ್ನು ಸಾಗಿಸುತ್ತಿರುವ ಇವರು ಅವರನ್ನು ಸದಾ ಸ್ಮರಿಸಿಕೊಳ್ಳುತ್ತಲೇ ಇರುತ್ತಾರೆ.

"ನನ್ನ ಮೂರು ಜನ ಅಕ್ಕಂದಿರು ಹುಟ್ಟಿ ಹತ್ತು ವರ್ಷದ ನಂತರ ಅಂದರೆ ೧೯೫೫ ರಲ್ಲಿ ನಾನು ಹುಟ್ಟಿದೆ. ಬಹಳ ವರ್ಷಗಳ ನಂತರ ಗಂಡು ಮಗ ಹುಟ್ಟಿದ ಎಂದು ಅಪ್ಪ ಬಹಳ ಪ್ರೀತಿಯಿಂದ ಬೆಳೆಸಿದರು. ಬಾಲ್ಯವನ್ನು ನೆನೆದಾಗಲೆಲ್ಲ ಮೈಸೂರಿನ ಒಂಟಿಕೊಪ್ಪಲ್‌ಗೆ, ಹಲವು ಬಾರಿ ಅಪ್ಪನ ಜೊತೆ ಅವರ ಆಫೀಸ್‌ಗೆ ಗ್ರಂಥಾಲಯಕ್ಕೆ ಹೋಗಿದ್ದು ನೆನಪಾಗುತ್ತೆ. ಇಂದಿಗೂ ಮೈಸೂರಿನಲ್ಲಿರುವ ಫಲಾಮೃತದಲ್ಲಿ ಅಪ್ಪ ಅನೇಕ ಬಾರಿ ಕೊಡಿಸಿದ ಫ್ರೂಟ್‌ಸಲಾಡ್ ನೆನಪಾಗುತ್ತದೆ. ನಾನು ನೋಡಿದಂತೆ ಅಪ್ಪ ಎಲ್ಲರೊಂದಿಗೆ ಬಹಳ ಶಾಂತಿಯಿಂದ ಪ್ರೀತಿಯಿಂದ ವ್ಯವಹರಿಸುತ್ತಿದ್ದರು.

ಈ ಗ್ರಂಥಾಲಯದಲ್ಲಿ ಅನೇಕ ಕನ್ನಡ ಪುಸ್ತಕಗಳನ್ನು ಓದಿ ಬೆಳೆದೆ. ಮೈಸೂರಿನಲ್ಲಿ ನಾನು ಕಳೆದ ಬಾಲ್ಯ ಚಿರಸ್ಮರಣೀಯ. ಅದೇ ರೀತಿ ಬೀರೂರಿನಲ್ಲಿ ನನ್ನ ಎಸ್.ಎಸ್.ಎಲ್.ಸಿ. ಮುಗಿಸಲು ಅವರೊಟ್ಟಿಗೆ ನಾನೊಬ್ಬನೇ ಹೋದೆ. ಅಲ್ಲಿ ಬೀರೂರಿನ ಸಿರಿಗಿರೆ ಮಠದ ಹಾಸ್ಟೆಲಲ್ಲಿ ಕೆಲ ದಿನದ ಕಳೆದ ನಂತರ ಬೆಂಗಳೂರಿನಲ್ಲಿ ಮನೆಕಟ್ಟಿದಾಗ ನಾನು ನಮ್ಮ ಸೋದರಮಾವನ ಜತೆಗೆ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದೆ. ನಂತರ ನನ್ನ ತಾಂತ್ರಿಕ ಶಿಕ್ಷಣವನ್ನು ಮುಗಿಸಿ ಅವರ ಒತ್ತಿನಿಂದಲೇ ನಾನು ಬಿ.ಇ. ಸೇರಿದ್ದು ಹಾಗೂ ಅವರ ಸ್ಫೂರ್ತಿ ಸೆಲೆಯಿಂದಲೇ ನನ್ನ ಡಿಗ್ರಿಯನ್ನು ಸಹ ಮುಗಿಸಿದ್ದು. ಅನೇಕ ಬಾರಿ ನನ್ನ ಜೀವನದಲ್ಲಿ ನಾನು ತಪ್ಪು ದಾರಿಗಿಳಿದಾಗ ಒಳ್ಳೆಯ ಮಾತುಗಳಿಂದ ನನ್ನನ್ನು ತಿದ್ದಿ ಒಳ್ಳೆಯ ಹಾದಿಗೆಳೆದಿದ್ದರು. ಹಾಗೂ ಅವರು ತಮ್ಮ ಕೊನೆಯ ಕಾಲದಲ್ಲಿ ಕಾಕತಾಳಿಯವೆಂಬಂತೆ ಬಹಳ ಇಷ್ಟದಿಂದ ದಾವಣಗೇರಿಯ ನಮ್ಮ ಮನೆಗೆ ಬಂದು ಕೊನೆಯುಸಿರೆಳೆದಿದ್ದರು. ಅವರ ಸಮಾಧಾನ ತಾಳ್ಮೆ ಹಾಗು ಶಾಂತ ಸ್ವಭಾವ ಈಗಲೂ ಜ್ಞಾಪಕಕ್ಕೆ ಬರುತ್ತದೆ".

ಶ್ರೀ ದೇವೀರಪ್ಪನವರ ಸೊಸೆ ಶ್ರೀಮತಿ ನಿರುಪಮ ಎಸ್. ಅವರು ಕಂಡಂತೆ :

"೧೯೮೦ರಲ್ಲಿ ಮದುವೆ ಗಲಾಟೆ ಕಳೆದು, ಗಂಡನ ಮನೆಗೆ ಬಂದ ನಂತರ ನಿತ್ಯದ ದಿನಚರಿ ಪ್ರಾರಂಭವಾದ ನಂತರವೇ ನಮ್ಮ ಮಾವನವರಾದ ಶ್ರೀ ಎಚ್. ದೇವೀರಪ್ಪನವರನ್ನು ನಾನು ಸನಿಹದಿಂದ ಕಂಡಿದ್ದು. ಶಾಂತ ಸ್ವಭಾವದ ವ್ಯಕ್ತಿ. ನಾನು ಕಂಡಂತೆ ದಿನದ ಹೆಚ್ಚು ವೇಳೆ ಓಲೆಗರಿಗಳನ್ನೋ ಅಥವಾ ಗ್ರಂಥಗಳನ್ನೊ ಓದುವುದರಲ್ಲಿಯೇ ಅಥವಾ ತಮ್ಮ ಬರವಣಿಗೆಗಳಲ್ಲೋ ನಿರತರಾಗಿರುತ್ತಿದ್ದರು. ಸಾತ್ವಿಕ ಆಚಾರ, ವಿಚಾರ ಅವರದು.

ಮದುವೆ ಆದಾಗ ನಾನು ಬಿ.ಎ., ತೇರ್ಗಡೆ ಆಗಿದ್ದೆ. ಅವರು ಸೂಚಿಸಿದಂತೆ ನಾನು ಕನ್ನಡದಲ್ಲಿ ಎಂ.ಎ., ಓದಿದೆ. ಸಾಹಿತ್ಯದ ಕುರಿತಾದ ಎಲ್ಲ ಸಮಾರಂಭಗಳಿಗೆ ಹೋಗಿ ಬರುತ್ತಿದ್ದರು. ಕವಿ 'ಹರಿಹರ'ನ ಬಗ್ಗೆ ಎಲ್ಲಿಲ್ಲದ ಪ್ರೀತಿ. ಹೀಗಾಗಿ ಬೆಂಗಳೂರಿನಲ್ಲಿ ಅವರು ಕಟ್ಟಿಸಿದ ಮನೆಗೆ 'ಹರಿಹರ' ಎಂದೇ ಹೆಸರಿಟ್ಟಿದ್ದರು. ಇಂದಿಗೂ ನಾವು ಅದೇ ಮನೆಯಲ್ಲಿ ವಾಸಿಸುತ್ತಿದ್ದೇವೆ. ಷೋಕೇಸ್‌ನಲ್ಲಿ ಇರುವ ೧೯೪೫ ರಲ್ಲಿ ಅವರಿಗೆ ಎಂ.ಎ., ಮಾಡಿದಾಗ ಮೈಸೂರು ವಿಶ್ವವಿದ್ಯಾಲಯ ನೀಡಿರುವ ಗೋಲ್ಡ್ ಮೆಡಲ್, ೧೯೭೯ರಲ್ಲಿ ಸಂದಿರುವ ತರಳಬಾಳು ಅವರ 'ಸಾಹಿತ್ಯ ಶ್ರೀ' ಪ್ರಶಸ್ತಿ, ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಈ ಪದಕಗಳನ್ನು ನಿತ್ಯ ನೋಡಿದಾಗ ಮೊಮ್ಮಕ್ಕಳಿಗೆ ಅಥಿತಿಗಳಿಗೆ ತೋರಿಸಿದಾಗ ಅವರ ಬಗ್ಗೆ ಹೆಮ್ಮೆ ಗೌರವ, ಮರ್ಯಾದೆ ಹೆಚ್ಚುತ್ತದೆ. ಕನ್ನಡ ಸಾಹಿತ್ಯದ ಬಗ್ಗೆ ಇಷ್ಟೊಂದು ಆಳವಾಗಿ ಅರಿತಿದ್ದ ಅಭ್ಯಸುತ್ತಿದ್ದ ವ್ಯಕ್ತಿಯನ್ನು



ಶ್ರೀ ಎಚ್.ಡಿ. ಶ್ರೀನಾಗೇಶ್ ಮದುವೆ ಸಂದರ್ಭ, ಬೀಗರೊಂದಿಗೆ

ಸನಿಹದಿಂದ ನೋಡಿದ್ದೆ ಎಂಬುದೇ ಸೊಸೆಯಾದ ನನಗೆ ಒಂದು ಹೆಮ್ಮೆಯ ವಿಷಯ".

ಶ್ರೀ ಎಚ್. ದೇವೀರಪ್ಪನವರ ಅಳಿಯಂದಿರಲ್ಲಿ ಹಿರಿಯವರಾದ ಡಾ. ಪಿ. ಬಸಪ್ಪ ಅವರು ತಮ್ಮ ಮಾವನವರ ಬಗ್ಗೆ ಬಹಳಷ್ಟು ಕಳಕಳಿಯಿಂದ ಹೀಗೆ ಹೇಳಿಕೊಂಡಿದ್ದಾರೆ : "ನಾನು ಕಂಡಂತೆ ಅವರು ಒಬ್ಬ ಸುಸಂಸ್ಕೃತ, ಸರಳ, ಅತಿನಿಷ್ಠಾವಂತ ಕಾರ್ಯಶೀಲ ಪ್ರತಿಭಾವಂತರು. ಹಳ್ಳಿಗಾಡಿನ ಸೊಗಡುಳ್ಳ ಕನ್ನಡ ವಿದ್ವಾಂಸರು. ಅವರಿಗೆ ಮಡದಿ ಮಕ್ಕಳು ಮೊಮ್ಮಕ್ಕಳು ಅಳಿಯಂದಿರಲ್ಲಿ ಅಪಾರ ಪ್ರೇಮ.

ನಾವು ಸರ್ಕಾರಿ ಕೆಲಸ ಮಾಡುತ್ತಿದ್ದ ಹಲವಾರು ಸ್ಥಳಗಳಿಗೆ ಅವರು ಭೇಟಿ ಕೊಟ್ಟಿದ್ದರು. ಹರಪನಹಳ್ಳಿ-ಬಾಗಳಿ-ದೇವಸ್ಥಾನಕ್ಕೆ ಭೇಟಿ ನೀಡಿ ಅದರ ಇತಿಹಾಸ ಕಲೆಹಾಕಿದ್ದರು. (೧೯೬೩) ಹೊನ್ನಾಳಿಯಲ್ಲಿದ್ದಾಗ ಅವರ ಊರಾದ ಮಲ್ಲಿಗೇನಹಳ್ಳಿ ಮತ್ತು ತೀರ್ಥರಾಮೇಶ್ವರಕ್ಕೆ ನಮ್ಮನ್ನೆಲ್ಲಾ ಕರೆದುಕೊಂಡು ಹೋಗಿದ್ದರು. ಆಗ ಅವರ ತಾಯಿ ಇದ್ದರು (೧೯೬೪-೬೫) ಮಲ್ಲಿಗೇನಹಳ್ಳಿ ಯಲ್ಲಿ ಗೋದಿಹುಗ್ಗಿ ಊಟ ವ್ಯವಸ್ಥೆಯಾಗಿತ್ತು. ಹಸಿಕಡಲೆ, ಮೆಂತೆಸೊಪ್ಪು ಇಂತಹ ದೇಶೀ ಹಳ್ಳಿ ಅಡುಗೆಗಳೆಲ್ಲ ಅವರಿಗೆ ತುಂಬ ಪ್ರಿಯವಾಗಿದ್ದಿತ್ತು. ದಾವಣಗೆರೆಗೆ ಬಂದಾಗಲೂ ತರಿಸುತ್ತಿದ್ದುದುಂಟು. ೧೯೬೬ ರಿಂದ ೧೯೭೧ ರವರೆಗೆ ಶಿಕಾರಿಪುರದಲ್ಲಿದ್ದಾಗಲೂ ಅಲ್ಲಿಗೆ ಭೇಟಿ ನೀಡಿದ್ದರು. ಆಯಾಯ ಸ್ಥಳಗಳ ತಿಂಡಿ, ಊಟವನ್ನು ಇಷ್ಟಪಡುತ್ತಿದ್ದರು. ೧೯೭೨ ರಿಂದ ೧೯೮೦ ರವರೆಗೆ ನಾವು ದಾವಣಗೆರೆಯಲ್ಲಿದ್ದಾಗ ಆರೋಗ್ಯ ತಪಾಸಣೆ ಮಾಡಿಸಿ ಕೊಂಡಿದ್ದುಂಟು. ನಮ್ಮ ಹಿರಿಯ ಮಗಳು ನಂದಿನಿ ಮದುವೆಗೆ (೩೧-೭-೧೯೮೭) ಬಂದು ಸಂತೋಷದಿಂದ ಆಶೀರ್ವದಿಸಿದ್ದರು. ಮಗ ಶ್ರೀನಾಗೇಶ ಆಗ ದಾವಣಗೆರೆಯಲ್ಲೇ ಕೆಇಬಿಯಲ್ಲಿ ಇಂಜನಿಯರ್ ಆಗಿ ಕೆಲಸ ಮಾಡುತ್ತಿದ್ದರು. ಈಗ ಅವರು ಮೈಸೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಬಹುಶಃ ಅವರ ಕೊನೆಯ ಪ್ರಯಾಣ ಬೆಂಗಳೂರಿನಿಂದ ೧೯೮೮ ರ ಜನವರಿ ಎಂದು ಕಾಣುತ್ತದೆ. ತಾರೀಖು ೩-೧-೧೯೮೮ರ ರಂದು ಅವರು ಹೃದಯಾಘಾತದಿಂದ ವಿಧಿವಶರಾದರು. ಅದರ ಹಿಂದಿನ ದಿನ ಚೆನ್ನಾಗಿಯೇ ಇದ್ದರು. ಸ್ವಲ್ಪದೂರ ನಡೆದು ಮಗನ ಮನೆಯಲ್ಲಿ ತಂಗಿದ್ದರು. ೩-೧-೧೯೮೮ ರ ಬೆಳಗಿನ ಜಾವ ಎದೆನೋವು ಕಾಣಿಸಿತು. ಅದಕ್ಕೂ ಮುಂಚೆ ಮನೆಯಲ್ಲೇ ಒಬ್ಬ ವೈದ್ಯರು ನೋಡಿಕೊಳ್ಳುತ್ತಿದ್ದರು. ಅವರ ಸಲಹೆ ಮೇರೆಗೆ ಅವರನ್ನು ಚಿಗಟೇರಿ ಜನರಲ್ ಆಸ್ಪತ್ರೆಗೆ ಕರೆದುಕೊಂಡು ಹೋದೆವು.

ಮನೆ ಒಂದನೇ ಅಂತಸ್ತಿನಲ್ಲಿದ್ದುದರಿಂದ ಕುರ್ಚಿ ಮೇಲೆ ಕೂರಿಸಿ ಹೊತ್ತುತಂದು ಕಾರಿನಲ್ಲಿ ಆಸ್ಪತ್ರೆಗೆ ಕರೆತಂದೆವು. ತಕ್ಷಣ ಡಾ. ಎಲಿಯವರು ಪರೀಕ್ಷಿಸಿದರು. ಕೊನೆಯ ಕ್ಷಣಗಳಲ್ಲಿ ಬಾಯಿಮೂಲಕ ಉಸಿರು ನಾನೂ ಹಾಕಿದೆ. ಕೃತಕ ಉಸಿರಾಟಕ್ಕೆ ಗಾಳಿ ಊದಿದರು. ಪ್ರಯೋಜನವಾಗಲಿಲ್ಲ. ಕೊನೆಗೆ ನೀರು ಎಂದರು. ಕುಡಿದು ಕೊನೆಯುಸಿರೆಳೆದರು. ಮರಣ ಹೀಗೆ ಸಂಭವಿಸಿತು.

ದಾವಣಗೆರೆಯಲ್ಲಿದ್ದಾಗ ಈಗಿರುವಷ್ಟು ವೈದ್ಯಕೀಯ ಸೌಲಭ್ಯಗಳಿರಲಿಲ್ಲ. ಬೆಂಗಳೂರಿನಲ್ಲಿದ್ದಿದ್ದರೆ ಇತ್ತೀಚಿನ ಆಧುನಿಕ ಸೌಲಭ್ಯಗಳನ್ನು ಉಪಯೋಗಿಸಿ ಇನ್ನೂ ಸ್ವಲ್ಪ ದಿವಸಗಳು ಉಳಿಸಿಕೊಳ್ಳುತ್ತಿದ್ದೆವು ಎನ್ನಿಸುತ್ತದೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇಷ್ಟೊಂದು ಸಂಶೋಧನೆ ಮಾಡಿ ಅನೇಕ ಪುಸ್ತಕಗಳ ಸಂಪಾದನೆ ಮಾಡಿ ಸ್ವತಃ ಅನೇಕ ಕಾದಂಬರಿ ನಾಟಕಗಳನ್ನು ರಚಿಸಿದರು. ಅವರಿಗೆ ಸಲ್ಲಬೇಕಾದ ಗೌರವ ಸಿಗಲಿಲ್ಲ. ಈ ಬಗ್ಗೆ ಅವರಿಗೆ ನೋವಿತ್ತು. ಅವರ ವೃತ್ತಿಜೀವನದ ಹಲವಾರು ಸಂದರ್ಭಗಳಲ್ಲಿಯೂ ಅನೇಕ ಅಡಚಣೆಗಳನ್ನು ಅನುಭವಿಸಿದ್ದರು. ಹರಿಹರ–ರಾಘವಾಂಕರು ಅವರ ಮೆಚ್ಚಿನ ನಾಯಕರು ಹಾಗೂ ಕವಿಗಳು. ಅದಕ್ಕೆಂದೇ ಅವರ ಮನೆಗೆ 'ಹರಿಹರ' ಎಂಬ ಹೆಸರನ್ನು ಇಟ್ಟಿದ್ದರು."

ದೇವೀರಪ್ಪನವರ ಬಗ್ಗೆ ಮಕ್ಕಳು ಅಳಿಯಂದಿರು ಹೇಳುವ ಈ ಎಲ್ಲ ಮಾತುಗಳನ್ನು ಗಮನಿಸಿದಾಗ ನಿಜಕ್ಕೂ ಆಶ್ಚರ್ಯದ ಸಂಗತಿಗಳು ಗೋಚರಿಸುತ್ತವೆ. ಹಳ್ಳಿಯ ಬದುಕನ್ನೇ ಉಸಿರಾಗಿಸಿಕೊಂಡು ಬಡತನದಲ್ಲಿ ಬೆಂದು, ಆರ್ಥಿಕ ಮುಗ್ಗಟ್ಟಿನಲ್ಲಿ ಓದನ್ನು ಮುಂದುವರಿಸಿ, ಮನೆತನದ ಮೊದಲ ಅಕ್ಷರಸ್ಥರಾಗಿ ಹೆಸರುಗಳಿಸಿ, ಎಲ್ಲ ಮಕ್ಕಳನ್ನು ವಿದ್ಯಾವಂತರನ್ನಾಗಿಸಿ, ಉಸಿರಿರುವತನಕವೂ ಸಾಹಿತ್ಯ, ಸಂಶೋಧನೆ ಕಾರ್ಯಗಳನ್ನು ಮುಂದುವರಿಸಿ ಕೊಂಡು ಬಂದು, ಆಗಾಗ ತೊಂದರೆ ಕೊಡುತ್ತಿದ್ದ ದಮ್ಮು ಕಾಯಿಲೆಯನ್ನು ಎದುರಿಸುತ್ತಾ ಬಂದ ಇವರು 'ಬೆಳುವಲದ ನಾಡಿನ' ಹೆಮ್ಮೆಯ ಸಂಶೋಧಕ, ಕಥೆಗಾರ, ನಾಟಕ ಕರ್ತೃ, ಕಾದಂಬರಿಕಾರ ಎಂದರೆ ಉತ್ಪ್ರೇಕ್ಷೆಯೇನಿಲ್ಲ. ಪ್ರಾಚೀನ ಕೃತಿಗಳನ್ನು ಅಧ್ಯಯನ ಮಾಡಿ ವಿಶ್ಲೇಷಿಸುವವರು ವಿರಳವಾಗುತ್ತಿರುವ ಈ ಹೊತ್ತಿನಲ್ಲಿ ದೇವೀರಪ್ಪನವರು ಮಾಡಿದ ಸಾಧನೆ ಸಣ್ಣದೇನಲ್ಲ.

**ಹರಿಹರಪ್ರಿಯ ದೇವೀರಪ್ಪ :**

ದೇವೀರಪ್ಪನವರು ನಾಡಿನ ಬಹುದೊಡ್ಡ ಸಂಶೋಧನ ವಿದ್ವಾಂಸರಲ್ಲೊಬ್ಬರು. ಸಾಹಿತ್ಯಕ್ಷೇತ್ರದಲ್ಲಿಯೂ ತಮ್ಮದೇ ಆದ ಛಾಪನ್ನು ಕಥೆ, ಕಾದಂಬರಿ, ನಾಟಕ,

ಪ್ರಬಂಧ, ವ್ಯಕ್ತಿಚಿತ್ರ ಪ್ರಕಾರಗಳಲ್ಲಿ ಒಡಮೂಡಿಸಿದ್ದಾರೆ. ನಂತರದ ಕ್ಷೇತ್ರ ಸಂಗ್ರಹ, ಸಂಪಾದನೆ, ಸಂಶೋಧನೆ, ಅಧ್ಯಯನ ಕುರಿತದ್ದು. ಪ್ರಾಚೀನ ಕೃತಿಗಳ ಆಳವಾದ ಅಧ್ಯಯನ ಇವರನ್ನು ಬಹುದೊಡ್ಡ ಸಂಶೋಧಕರನ್ನಾಗಿ ಎತ್ತರಕ್ಕೆ ಕೊಂಡೊಯ್ದಿತು. 'ಹರಿಹರ'ನೊಬ್ಬನೇ ಇವರ ಜೀವನಾಡಿಯಾದ. ಇವನ ಸಾಹಿತ್ಯ ಕೃಷಿಯನ್ನು ಹೆಕ್ಕಿ ತೆಗೆದಷ್ಟೂ ಬಂಗಾರದ ಗಣಿಯಾದ. ವಿಶ್ಲೇಷಣೆಗೆ ತೊಡಗಿದಷ್ಟೂ ಆರಾಧ್ಯ ದೈವವಾದ. ಮಾತು ಕೃತಿಗಳೆರಡರಲ್ಲೂ ಬದುಕಿನುಸಿರಾದ. ದೇವೀರಪ್ಪನವರ ಸಂಶೋಧನ ಕಾರ್ಯವೆಂದರೆ ಹರಿಹರನೆಂಬಂತಾದ. ಶರಣರ ಬದುಕನ್ನು ಒರೆಗೆಹಚ್ಚಿ ನೋಡಿದಂತೆಲ್ಲಾ ದೇವೀರಪ್ಪನವರೂ ಶರಣರಾದಂತೆ ಕಂಡರು. ರಗಳೆಪ್ರಿಯ ಹರಿಹರನಂತೇ ಹರಿಹರಪ್ರಿಯ ದೇವೀರಪ್ಪನವರಾದರು. ಕನ್ನಡ ಸಾಹಿತ್ಯಲೋಕದಲ್ಲಿ ಇದೊಂದು ಮರೆಯಲಾಗದ ವಿಸ್ಮಯ ಸಂಗತಿ ಎಂದರೆ ಅತಿಶಯೋಕ್ತಿಯೇನಲ್ಲ.

**ಸಾಹಿತ್ಯ ಸಾಧಕ :**

ದೇವೀರಪ್ಪನವರು ಬರೆದ ಸೃಜನಾತ್ಮಕ ಅಥವಾ ಸ್ವತಂತ್ರ ಕೃತಿಗಳು ಕೇವಲ ಐದು. ಒಂದು ಸಣ್ಣಕಥೆ, ಎರಡು ಕಾದಂಬರಿ, ಎರಡು ನಾಟಕಗಳು, ಸೃಜನಾತ್ಮಕ ಲೇಖನ ಸಂಕಲನಗಳು ಆರು. ಸಂಪಾದನಾ ಕೃತಿಗಳು ೨೨. ಸ್ವತಂತ್ರವಾಗಿ ೧೨, ಇತರರೊಡನೆ ೧೧ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಪ್ರತಿಯೊಂದು ಕೃತಿಗಳಲ್ಲಿಯೂ ದೇವೀರಪ್ಪನವರ ಕೆಲಸ ಬಹಳಷ್ಟು ಅಚ್ಚುಕಟ್ಟು. ಕಥೆ, ಕಾದಂಬರಿ ಹಾಗೂ ನಾಟಕಗಳಲ್ಲಿ ದೇವೀರಪ್ಪನವರ ವೈಯಕ್ತಿಕ ಸಾಹಿತ್ಯ ಕೃಷಿಸಾಧನೆ ಅಮೋಘವಾದುದು. ತಾಜಾತನದ್ದು. ಹಳ್ಳಿಯ ಬದುಕನ್ನು ಯಥಾವತ್ತಾಗಿ ಹಿಡಿದಿಟ್ಟ ಸೊಗಡು ಈ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಹಾಗೆಯೇ ಪ್ರಬಂಧದ ಕೃತಿಗಳಲ್ಲಿ ಅಧ್ಯಯನದ ವೈಶಿಷ್ಟ್ಯತೆ ಅನಾವರಣಗೊಂಡಿರುತ್ತದೆ. ಇನ್ನೂ ಸಂಶೋಧನ ಕೃತಿಗಳಲ್ಲಿ ಕಂಡು ಬರುವ ಪಾಂಡಿತ್ಯ, ಪ್ರತಿಭೆ, ವಿದ್ವತ್ತುಗಳು ಒಬ್ಬ ನಿಷ್ಠಾವಂತ ಸಂಶೋಧಕನಲ್ಲಿರುವ ಗುಣಗೌರವವನ್ನು ಎತ್ತಿ ಹಿಡಿಯುತ್ತವೆ. ಗೊಂದಲಕ್ಕೆ ಅವಕಾಶವೀಯದಂತೆ ಶೋಧನೆಗೈದು ಮಂಡಿಸುವ ದೇವೀರಪ್ಪನವರ ಕರ್ತವ್ಯ ಪ್ರಜ್ಞೆ ಬೇರೆಯವರಿಗೆ ದಾರಿದೀಪವಾಗುತ್ತದೆ.

**ಕೃತಿಗಳ ಪರಿಚಯ :**

ದೇವೀರಪ್ಪನವರ ಕೆಲವು ಮುಖ್ಯ ಕೃತಿಗಳ ಪರಿಚಯವನ್ನು ಸಂಕ್ಷಿಪ್ತವಾಗಿ

ಮಾಡಿಕೊಡಲು ಹೆಮ್ಮೆಯೆನಿಸುತ್ತದೆ. ಸಮಗ್ರ ಕೃತಿಗಳ ಅವಲೋಕನ ಮಾಡಲಾಗದಿದ್ದರೂ ಪರಿಚಯಾತ್ಮಕ ದೃಷ್ಟಿಯಿಂದ, ದೇವೀರಪ್ಪನವರ ಕಾರ್ಯ ಸಾಧನೆಯ ಹಿತದೃಷ್ಟಿಯಿಂದ ನೀಡಬಹುದೆನಿಸುತ್ತದೆ. ಇದೊಂದು ರೀತಿಯ ಪಕ್ಷಿನೋಟವೆಂದರೂ ತಪ್ಪಿಲ್ಲ. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ, ಉಪ್ಪಿನ ಸತ್ಯಾಗ್ರಹದಲ್ಲಿ ಹೆಜ್ಜೆಯಿಟ್ಟು, ಸ್ವಾತಂತ್ರ್ಯ ಲಭಿಸುವವರೆಗೂ ದುಡಿದು, ಸ್ವಾತಂತ್ರ್ಯ ದೊರೆತ ವರ್ಷವೇ ದೇವೀರಪ್ಪ ನವರಿಗೆ ಪ್ರಪ್ರಥಮ ಸಾಹಿತ್ಯ ಕೃತಿಯನ್ನು ಹೊರತರುವ ಸ್ವಾತಂತ್ರ್ಯ ಸಿಕ್ಕಿದ್ದು ಈ ನಾಡಿನ ಹಾಗೂ ದೇವೀರಪ್ಪನವರ ಪುಣ್ಯವೆಂದೇ ಹೇಳಬೇಕು. ಇವರು ಹೊರತಂದ ಮೊದಲ ಸಣ್ಣಕಥಾ ಸಂಕಲನದ ಹೆಸರೇ 'ಸುವರ್ಣ ಸಂಪುಟ' ಎಂದು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ್ದನ್ನು ದೇವೀರಪ್ಪನವರು ಕನ್ನಡ ಸಾಹಿತ್ಯ ಲೋಕಕ್ಕೆ ಪ್ರವೇಶಿಸಿದ್ದನ್ನು ಈ ಕೃತಿ ಸಾಂಕೇತಿಕವಾಗಿ ಪ್ರತಿನಿಧಿಸುತ್ತದೆ.



ಎಚ್. ದೇವೀರಪ್ಪ

**ಸೃಜನ ಕೃತಿಗಳು :**

**ಸುವರ್ಣ ಸಂಪುಟ : (೧೯೪೭)**

ಹಳ್ಳಿಯ ಬದುಕನ್ನು ಸೊಗಸಾಗಿ ಮೈಗೂಡಿಸಿಕೊಂಡು ಅಲ್ಲಿನ ಜೀವನಕ್ರಮವನ್ನು ಯಥಾವತ್ತಾಗಿ ಹಿಡಿದಿಡುವ ಪ್ರಯತ್ನ ಇಲ್ಲಿನ ಕಥೆಗಳಲ್ಲಿದೆ. ಈ ಸಂಕಲನದಲ್ಲಿ ಒಟ್ಟು ಆರು ಸಣ್ಣಕಥೆಗಳಿವೆ. ಇವುಗಳಲ್ಲಿ ಕೆಲವು 'ಜಯಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತವೆ. ಸಂಕಲನದ ಕಥೆಗಳನ್ನು ಕುರಿತಂತೆ ಸಂಪಾದಕರು ಹೀಗೆ ಹೇಳಿದ್ದಾರೆ. "ಈ 'ಸುವರ್ಣ ಸಂಪುಟ'ದಲ್ಲಿ ಆರು ಕಥೆಗಳಿವೆ. ಈ ಕಥೆಗಳಲ್ಲಿ ಒಂದೆರಡನ್ನು ಜೀವನ ಚಿತ್ರಗಳೆಂದು ಕರೆದರೆ ತಪ್ಪಾಗಲಾರದೆಂದು ತೋರುತ್ತದೆ. ಈ ಕಥೆಗಳಲ್ಲಿ ಕಂಡುಬರುವ ಮುಖ್ಯವಾದ ಗುಣಗಳಲ್ಲಿ ಒಂದೆರಡನ್ನು ಇಲ್ಲಿ ನಿರೂಪಿಸಬಹುದು.

ಹೊಸಗನ್ನಡ ಸಾಹಿತ್ಯದಲ್ಲಿ ಈಗ ಚಿತ್ರಿತವಾಗುತ್ತಿರುವ, ಒಂದು ದೃಷ್ಟಿಯಿಂದ ನೋಡಿದರೆ ಚರ್ವಿತ ಚರ್ವಣವಾದ ಪೇಟೆಯ ಜೀವನವನ್ನು ಓದಿ ಬೇಸರವಾಗಿರುವವರಿಗೆ ಈ ಕಥೆಗಳಲ್ಲಿ ಕಂಡುಬರುವ ಒಕ್ಕಲು ಮಕ್ಕಳ ಬಾಳನ್ನು ಕಂಡು ಸಂತೋಷವಾಗುತ್ತದೆ. ವಿಷಯಕ್ಕೆ ಹೊಂದುವಂತೆ ಕತೆಗಾರರು ಬಳಸಿರುವ ಜನಸಾಮಾನ್ಯರ ಆದರೆ ಗ್ರಾಮ್ಯವಲ್ಲದ ಭಾಷೆ, ಕತೆಗಳ ನಡುವೆ ಮಿಂಚುವ ತಿಳಿಯಾದ ಹಾಸ್ಯ, ವಿಷಯದ ವಿವರಣೆಗೆ ಸಹಾಯಕವಾಗಿ ಅಲ್ಲಲ್ಲೇ ಬರುವ ಸುಂದರವಾದ ಗಾದೆಗಳು, ಲೇಖಕರು ಹಳ್ಳಿಯ ಬಾಳಿನ ಸೂಕ್ಷ್ಮವಾದ ಅವಲೋಕನ ಇವೆಲ್ಲ ಇಲ್ಲಿನ ಕತೆಗಳಿಗೆ ಮೆರುಗನ್ನು ತಂದಿವೆ" ಎಂದು ಹೇಳಿರುವ ಮಾತುಗಳು ಗಮನಾರ್ಹವಾಗಿವೆ. ಸುವರ್ಣ ಸಂಪುಟದ ಎಲ್ಲ ಕತೆಗಳಲ್ಲಿಯೂ ಎದ್ದು ಕಾಣುವ ದೇವೀರಪ್ಪನವರ ಹಳ್ಳಿಯ ಬದುಕಿನ ಚಿತ್ರಣ ಕಣ್ಣಿಗೆ ಕಟ್ಟುವಂತೆ ಮೂಡಿಬಂದಿದೆ. ಇದು ಇವರ ಪ್ರಪ್ರಥಮ ಕೃತಿಯಾದರೂ ಇಂದಿಗೂ ಶ್ರೇಷ್ಠ ಕೃತಿಗಳ ಸಾಲಿನಲ್ಲಿ ನಿಲ್ಲುವಂತಹ ಪ್ರಾತಿನಿಧಿಕ ಕಥಾ ಸಂಕಲನವಾಗಿದೆ.

**ಹಳ್ಳಿಯ ಬದುಕು (೧೯೪೭) :**

ದೇವೀರಪ್ಪನವರು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ವರ್ಷದಲ್ಲಿ ಒಂದು ಕೃತಿಯನ್ನಷ್ಟೇ ಹೊರತರಲಿಲ್ಲ. ಇನ್ನೊಂದು ಅವರ ಮಹತ್ವಾಕಾಂಕ್ಷೆಯ ಕೃತಿಯಾದ 'ಹಳ್ಳಿಯ ಬದುಕು' ಕಾದಂಬರಿಯನ್ನು ಬರೆದು ಪ್ರಕಟಿಸಿದರು. ದೇಶಕ್ಕೆ ಸ್ವಾತಂತ್ರ್ಯ ಬಂದದ್ದಕ್ಕೂ ದೇವೀರಪ್ಪನವರು ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟದ್ದಕ್ಕೂ ಎರಡಕ್ಕೂ ಅವಿನಾಭಾವ ಸಂಬಂಧವಿದೆಯೇನೋ ಎಂಬಂತೆ 'ಹಳ್ಳಿಯ ಬದುಕಿ'ಗೂ ಸ್ವಾತಂತ್ರ್ಯ ಲಭಿಸಿತು. 'ದೇಶ'ಕ್ಕೂ ಸ್ವಾತಂತ್ರ್ಯ ಲಭಿಸಿತು. ಇದೊಂದು ಸಾಮಾಜಿಕ ಕಾದಂಬರಿ. ಹೊನ್ನಾಳಿ ಭಾಗದ ಆಡುಭಾಷೆಯನ್ನು ಯಥಾವತ್ತಾಗಿ ಇಲ್ಲಿನ ಪಾತ್ರಗಳಲ್ಲಿರಿಸಿ ಗ್ರಾಮೀಣ ಸೊಗಡನ್ನು ಎತ್ತಿಹಿಡಿದಿದ್ದಾರೆ. ಮಲ್ಲಿಗೇನಹಳ್ಳಿ ಶಿವಜ್ಜಿ ಮೊದಲಾದವರು ಹಾಡುತ್ತಿದ್ದ ಜನಪದ ಹಾಡುಗಳನ್ನು ಈ ಕೃತಿಯಲ್ಲಿ ಸಂದರ್ಭೋಚಿತವಾಗಿ ಬಳಸಿಕೊಂಡಿದ್ದಾರೆ. 'ಯಾರು ಇದ್ದರು ನನ್ನ ತಾಯವ್ವನ್ಹೋಲರು' 'ಹಾಲುಂಡ ತವರಿಗೆ ಏನೆಂದು ಹಾಡಲೆ' 'ತಾಯಿದ್ರೆ ತವರ್ಹೆಚ್ಚು ತಂದಿದ್ರೆ ಬಳಗ್ಹೆಚ್ಚು' 'ಊರು ದೇವರ ಮಾಡಬೇಕಣ್ಣ, ತನ್ನೊಳಗೆ ತಾನು' ಮುಂತಾದ ಹಾಡುಗಳು ಇಲ್ಲಿ ಅರ್ಥವತ್ತಾಗಿ ಬಳಕೆಗೊಂಡಿವೆ. ಪ್ರಾದೇಶಿಕವಾಗಿ ಬಳಸಲ್ಪಡುವ ಎಷ್ಟೋ ಪದಗಳು ಈ ಕೃತಿಯಲ್ಲಿವೆ. ಅವುಗಳಿಗಿರುವ ವಿಶೇಷಾರ್ಥಗಳನ್ನು ಗಮನಿಸಿದಾಗ ಇಲ್ಲಿನ

ಭಾಷೆಯ ಸತ್ವ ಆಶ್ಚರ್ಯವನ್ನುಂಟು ಮಾಡುತ್ತದೆ. ಅಲ್ಲಲ್ಲಿ ಬಳಸಿರುವ ಗಾದೆ ಮಾತುಗಳು, ರೈತನ ಬದುಕಿಗೆ, ವ್ಯವಸಾಯಕ್ಕೆ ಸಂಬಂಧಿಸಿದ ಕೆಲವೊಂದು ನುಡಿಗಳು ಈಗ ನೆನಪಿಸಿಕೊಳ್ಳಲು ಆಗದಷ್ಟು ಇಲ್ಲಿ ತುಂಬಿಹೋಗಿವೆ. 'ಜೋಳದ ಹಿಳಿಲು' 'ಬೆಳ್ಳಸೆ' 'ಪಾಡದಾರ' ಎಂಬಂತಹ ಹಳ್ಳಿಗರ ಮಾತುಗಳು ನಮಗೆ ಮರೆತೇ ಹೋಗಿವೆ. ಈ ಕೃತಿ ಪ್ರೌಢಶಾಲೆಯ ಮೊದಲನೆಯ ತರಗತಿಗೆ ಪಠ್ಯ ಪುಸ್ತಕವಾಗಿತ್ತು ಎಂಬುದು ಗಮನಾರ್ಹ ಸಂಗತಿ.

**ಬೆಳುವಲದಮಡಿಲಲ್ಲಿ (೧೯೫೩) :**

ಸ್ವಂತ ಪ್ರಕಾಶನದಲ್ಲೇ ನಾಲ್ಕು ಮುದ್ರಣಗಳನ್ನು ಕಂಡಿರುವ ಈ ಕೃತಿ ಸಿನಿಮಾ ಆಗಿಯೂ ಪ್ರಖ್ಯಾತಿ ಪಡೆದಿದೆ. "ಕನ್ನಡ ನಾಡಿನ ನಡುಗಡ್ಡೆಯಂತಿರುವ ಬೆಳುವಲ ನಾಡಿನ ಸೌಂದರ್ಯ ಸೊಬಗುಗಳ ಬಣ್ಣನೆ, ಅಲ್ಲಿಯ ಒಕ್ಕಲು ಮಕ್ಕಳ ನೋವು ನಲಿವು, ಕನಸು ಕೊರಗುಗಳ ನಿರೂಪಣೆ ಈ ಕಾದಂಬರಿಯ ಉದ್ದೇಶ. ಇದರಲ್ಲಿ ಬರುವ ವ್ಯಕ್ತಿಗಳು, ಘಟನೆಗಳು, ಸನ್ನಿವೇಶಗಳು ಈ ಶತಮಾನದ ಪೂರ್ವಾರ್ಧಕ್ಕೆ ಸಂಬಂಧಿಸಿದುವು. ಆದರೆ ಅಂದಿನ ಶೈಕ್ಷಣಿಕ ಸಮಸ್ಯೆಗಳು ಇಂದಿಗೂ ಹಾಗೆಯೇ ಇವೆ. ಬೆಳುವಲ ಪ್ರಾಂತದ ಭಾಷೆಯ ಬನಿ, ಬೆಡಗು, ಬಣ್ಣಗಳ ಅರಿವಾಗಲೆಂದು ಅಲ್ಲಿಯ ಮಾತು, ಗಾದೆ, ಪಡೆನುಡಿ, ಪಾಡುಪದಗಳನ್ನು ಉಚಿತವರಿತು ಬಳಸಿಕೊಂಡಿದ್ದೇನೆ. ಬೆಂಗಳೂರು ಜ್ಞಾನಭಾರತಿಯ ಕನ್ನಡ ಅಧ್ಯಯನ ಕೇಂದ್ರದ ಪಠ್ಯ ಪುಸ್ತಕ ಸಮಿತಿಯವರು ಈ ಪುಸ್ತಕವನ್ನು ೧೯೭೬-೭೭ ನೆಯ ಸಾಲಿನ ಪ್ರಥಮ ಬಿ.ಎ., ಬಿ.ಎಸ್ಸಿ., ಬಿ.ಕಾಮ್., ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿ ಗೊತ್ತು ಮಾಡಿರುವರು" ಎಂದು ನಾಲ್ಕನೆಯ ಮುದ್ರಣದ ಅರಿಕೆಯಲ್ಲಿ ಕಾದಂಬರಿಕಾರರು ಹೇಳಿಕೊಂಡಿದ್ದಾರೆ.

ಹೊನ್ನಾಳಿ ಸುತ್ತಲ ಭಾಷೆಯ ಸೊಗಡನ್ನು ತಿಳಿಯಬೇಕಾದರೆ, ಅಲ್ಲಿನ ಸ್ವಾತಂತ್ರ್ಯ ಪೂರ್ವದ ಬದುಕನ್ನು ಅರ್ಥವಿಸಿಕೊಳ್ಳಬೇಕಾದರೆ ಈ ಕೃತಿಯನ್ನು ಓದಬೇಕಾದ ಅನಿವಾರ್ಯವಿದೆ. ಇಲ್ಲಿ ಬಳಸಿರುವ ಜನಪದ ಹಾಡು, ಗಾದೆ, ಪಡೆನುಡಿ, ಪಾಡು ಪದಗಳು ಅಲ್ಲಿನ ಮಣ್ಣಿನ ಸೊಗಡನ್ನು ಪ್ರತಿಬಿಂಬಿಸುತ್ತವೆ. ಅನೇಕ ಶಾಸ್ತ್ರ ಸಂಪ್ರದಾಯಗಳ ಪರಿಚಯ ಇಲ್ಲಿದೆ. ಸುಮಾರು ೨೮೮ ಪುಟಗಳಷ್ಟು ದೀರ್ಘವಾದ ಈ ಕಾದಂಬರಿ ರಾಜೇಶ್ ನಾಯಕತ್ವದಲ್ಲಿ ಸಿನಿಮಾ ಆಗಿ ಅದ್ಭುತ ಯಶಸ್ಸನ್ನು ಗಳಿಸಿದೆ. ಕೆಲವು

ವಿಶಿಷ್ಟ ಪದಗಳ ಅರ್ಥವನ್ನು ಕಡೆಯ ೨ ಪುಟಗಳಲ್ಲಿ ನೀಡಲಾಗಿದೆ. ದೇವೀರಪ್ಪನವರು ಬರೆದ ೨ ಸಾಮಾಜಿಕ ಕಾದಂಬರಿಗಳಲ್ಲಿ 'ಬೆಳುವಲದ ಮಡಿಲಲ್ಲಿ' ಅತ್ಯಂತ ಜನಪ್ರಿಯತೆ ತಂದುಕೊಟ್ಟ ಕೃತಿಯಾಗಿದೆ. ಸಾಹಿತ್ಯ ಕ್ಷೇತ್ರದಲ್ಲಿ ದೇವೀರಪ್ಪನವರು ಸೃಜನಾತ್ಮಕವಾಗಿ ಕೃಷಿಗೈದಿದ್ದಿದ್ದೇ ಆಗಿದ್ದಿದ್ದರೆ ಇನ್ನೂ ಉತ್ತಮ ಕೃತಿಗಳನ್ನು ಕೊಡುತ್ತಿದ್ದರು ಎಂಬುದಕ್ಕೆ ಈ ಕೃತಿಗಳೇ ಸಾಕ್ಷಿ.

**ಕಲಾಯೋಗಿ (೧೯೫೯) :**

ದೇವೀರಪ್ಪನವರು ಮೊದಲಿಗೆ ಕಥೆಗಾರರಷ್ಟೇ ಆಗಿರಲಿಲ್ಲ. ಕಾದಂಬರಿ ಕಾರರೂ ಆಗಿ, ೨ ನಾಟಕಗಳನ್ನು ಸಾಹಿತ್ಯಲೋಕಕ್ಕೆ ಸಮರ್ಪಿಸಿದ ಉತ್ತಮ ನಾಟಕಕಾರರು ಹೌದು ಎಂಬುದಕ್ಕೆ ಈ ಕೃತಿ ಸಾಕ್ಷಿ. ಇದು ಇವರ ಮೊದಲ ನಾಟಕ ಕೃತಿ. ಇದರಲ್ಲಿ ೨ ನಾಟಕಗಳಿವೆ. ೧ ಕಲಾಯೋಗಿ ೨ ಕಾದಂಬರಿ. 'ಕಲಾಯೋಗಿ' ನಾಟಕದ ವಸ್ತು ಹೀಗಿದೆ : ದ್ವಾರ ಸಮುದ್ರದ (ಹಳೆಯ ಬೀಡು) ಹೊಯ್ಸಳೇಶ್ವರ ಶಾಂತಲೇಶ್ವರ ದೇವಾಲಯವನ್ನು ಕಟ್ಟಿಸುವಂದು ನಡೆದ ಒಂದು ಘಟನೆಯನ್ನು ಕುರಿತು ಲಿಂಗೈಕ್ಯ ಹಳೆಯಬೀಡು ಪಟೇಲ್ ಚಿಕ್ಕಣ್ಣಗೌಡರು ಹೇಳಿದ್ದ ಒಂದು ದಂತ ಕತೆಯನ್ನು ಆಧಾರವಾಗಿಟ್ಟುಕೊಂಡು ರಚಿಸಿದ ನಾಟಕ ಎಂದು ಕೃತಿಕಾರರು ಹೇಳಿಕೊಂಡಿದ್ದಾರೆ. ಅದಕ್ಕೆ ಕೊಂಚ ಬಣ್ಣಕಟ್ಟಿ ಅಂದಿನ ಜನಜೀವನಕ್ಕೆ ಒಪ್ಪುವಂಥ ಒಂದೆರಡು ಕಾಲ್ಪನಿಕ ಘಟನೆಗಳನ್ನು ಸೃಷ್ಟಿಸಿ ಈ ನಾಟಕವನ್ನು ೬ ದೃಶ್ಯಗಳಲ್ಲಿ ಹೆಣೆಯಲಾಗಿದೆ. ಇದರಲ್ಲಿಯೇ ಇರುವ ಇನ್ನೊಂದು ನಾಟಕ 'ಕಾದಂಬರಿ'. ಮೂಲತಃ ಬಾಣ ಮಹಾ ಕವಿಯ 'ಕಾದಂಬರಿ' ಮಹಾಕಾವ್ಯದಿಂದ ವಸ್ತುವನ್ನು ಆರಿಸಿಕೊಳ್ಳಲಾಗಿದೆ. ಇಂದಿನ ರಂಗಮಂಟಪಕ್ಕೆ ಅಳವಡುವಂತೆ ಮೂಲಕಥೆಯನ್ನು ಸಂಗ್ರಹಿಸಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಳ್ಳಲಾಗಿದ್ದು ೧೨ ದೃಶ್ಯಗಳಲ್ಲಿ ನಾಟಕ ರಚಿಸಲಾಗಿದೆ.

**ತುಂಗಭದ್ರ (೧೯೬೧) :**

'ತುಂಗಭದ್ರ' ದೇವೀರಪ್ಪನವರ ಮತ್ತೊಂದು ನಾಟಕ. ಇವರಿಗೆ ಹರಿಹರನೆಂದರೆ ಬಹಳ ಇಷ್ಟವಾದ ಕವಿ ಹಾಗೂ ಹರಿಹರನ ಶಿಷ್ಯ ರಾಘವಾಂಕ ಕೂಡ. ಇವರಿಬ್ಬರ ಜೀವನ, ಸಾಧನೆ, ಸಿದ್ಧಿಗಳನ್ನು ಈ ನಾಟಕದಲ್ಲಿ ಸೊಗಸಾಗಿ ಚಿತ್ರಿಸಲಾಗಿದೆ. ಕೃತಿಯಲ್ಲಿ ನಾಟಕಕಾರರು ಹೀಗೆ

ಹೇಳಿಕೊಂಡಿದ್ದಾರೆ : "ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಕ್ರಾಂತಿ ಕವಿಗಳೆಂದು ಹೆಸರಾದ ಪಂಪಾಕ್ಷೇತ್ರದ ಎರಡು ಕಣ್ಣುಗಳಂತೆ ಕಂಗೊಳಿಸುತ್ತಿರುವ, ಹರಿಹರ-ರಾಘವಾಂಕರ ಜೀವನ ನಾಟಕ ಇದು. ಈ ಶರಣ ಕವಿಗಳ ಅಮರ ಜೀವನದ ಬಗೆಗೆ ದೊರೆತ ಸಾಹಿತ್ಯದಲ್ಲಿ ಸಾಧ್ಯವಾದಷ್ಟನ್ನು ಹದವರಿತು ಬಳಸಿಕೊಂಡಿದ್ದೇನೆ. ಉಪಲಬ್ಧ ಸಾಮಗ್ರಿಯಲ್ಲಿ ಹುದುಗಿರುವ ಚಾರಿತ್ರಾಂಶಗಳಿಗೆ ಹೆಚ್ಚು ಪ್ರಾಧಾನ್ಯವಿತ್ತು, ಅದೇ ಚೌಕಟ್ಟಿನೊಳಗೆ ಕೆಲವು ಸಣ್ಣ ಮಾರ್ಪಾಟುಗಳನ್ನು ಮಾಡಿಕೊಂಡಿರುತ್ತೇನೆ. ಆ ಕಾಲದ ಜನಜೀವನದಿಂದಲೆ ಮೂಡಿಬಂದಿರುವ ಕೆಲವು ಕಾಲ್ಪನಿಕ ಪಾತ್ರಗಳಿಂದ ಮೂಲ ಚರಿತ್ರೆಗೆ ಭಂಗಬಂದಿಲ್ಲವೆಂದು ನನಗನಿಸಿದೆ."

ಈ ಕೃತಿಯಲ್ಲಿ ಅಲ್ಲಲ್ಲಿ ವಚನಗಳ, ರಗಳೆಯ, ಷಟ್ಪದಿಗಳ, ಜಾನಪದ ಗೀತೆಗಳ ಭಾವಭಾಷೆಗಳನ್ನು ಬಳಸಲಾಗಿದೆ. ಸನ್ನಿವೇಶ ರಚನೆಗೂ ಆ ಕಾಲದ ಜನತೆಯ ನಂಬುಗೆ ಶ್ರದ್ಧೆಗಳನ್ನು ಎತ್ತಿ ತೋರಿಸುವುದಕ್ಕೆ ಈ ಶೈಲಿ ಅಗತ್ಯವಾಯಿತು ಎಂದಿದ್ದಾರೆ. ಈ ನಾಟಕ ೨೧ ತರಂಗಗಳಲ್ಲಿ ಮೂಡಿಬಂದಿದೆ. ಐತಿಹಾಸಿಕ ಘಟನೆಗಳನ್ನು ಶರಣಕವಿಗಳ ಚಾರಿತ್ರಿಕ ಬದುಕನ್ನು ಉತ್ತಮವಾಗಿ ಒಡಿದಿಡುವ ಪ್ರಯತ್ನದಲ್ಲಿ ಕೃತಿಕಾರರು ಸಫಲರಾಗಿದ್ದಾರೆ ಎಂದು ಹೇಳಬಹುದು.

ಈ ವರೆಗೆ ನೋಡಿದ ಕೃತಿಗಳೆಲ್ಲವೂ ದೇವೀರಪ್ಪನವರು ಬರೆದ ಸ್ವತಂತ್ರ್ಯ ಕೃತಿಗಳು. ಒಂದು ವೇಳೆ ಹೀಗೆಯೇ ಸೃಜನಾತ್ಮಕ ಸಾಹಿತ್ಯ ಕ್ಷೇತ್ರದಲ್ಲಿ ಇವರು ಮುಂದುವರಿದಿದ್ದಿದ್ದರೆ ಕನ್ನಡ ಸಾಹಿತ್ಯಕ್ಕೆ ಸಾಕಷ್ಟು ಮಹತ್ವದ ಕೃತಿಗಳನ್ನು ನೀಡುತ್ತಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಆದರೆ ದೇವೀರಪ್ಪನವರ ಹಿಂದೆ ದೊಡ್ಡ ವಿದ್ವತ್-ಪಾಂಡಿತ್ಯ- ಪ್ರತಿಭೆಗಳ, ವಿದ್ವಾಂಸರ ಪ್ರೇರಣೆ, ಪ್ರಭಾವ, ಆಶೀರ್ವಾದಗಳಿವೆ. ಹಾಗಾಗಿ ಪದವೀಧರ ತಜ್ಞರಾಗಿ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಗೆ ಕೆಲಸಕ್ಕೆ ಸೇರಿದಾಗಿನಿಂದ ಹಸ್ತಪ್ರತಿ, ಓಲೆಗರಿಗಳಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಕಾರಣ ಗ್ರಂಥಸಂಪಾದನೆಯ ಕಾರ್ಯವನ್ನು ಅವಿರತವಾಗಿ ಮುಂದುವರಿಸ ತೊಡಗಿದರು. ಸಂಶೋಧನಕ್ಷೇತ್ರ ಇಂತಹ ವಿದ್ವಾಂಸರನ್ನು ತನ್ನ ಮಡಿಲಲ್ಲಿ ಕೂರಿಸಿಕೊಂಡು ಪ್ರಾಚೀನ ಕೃತಿಗಳ ಸಂಗ್ರಹ, ಸಂಪಾದನೆ, ಅಧ್ಯಯನ, ಪ್ರಕಟಣೆ ಮುಂತಾದ ಕೆಲಸಗಳಲ್ಲಿ ತೊಡಗುವಂತೆ ಮಾಡಿಬಿಟ್ಟಿತು. ಆದ್ದರಿಂದಲೇ ದೇವೀರಪ್ಪನವರೆಂದಕೂಡಲೆ ಸಂಶೋಧನ ಕ್ಷೇತ್ರದಲ್ಲಿ ತಟ್ಟನೆ ನೆನಪಿಗೆ ಬರುತ್ತದೆ.

ದೇವಿರಪ್ಪನವರು ಕೇವಲ ಪ್ರಾಚೀನ ಹಳಗನ್ನಡ, ಕಾವ್ಯ, ರಗಳೆ, ಸಾಂಗತ್ಯ, ವಚನ ಇತ್ಯಾದಿಗಳನ್ನು ಸಂಗ್ರಹಿಸಿ ಸಂಪಾದಿಸಿಕೊಡಲಿಲ್ಲ. ಪ್ರತಿಯೊಂದು ಕೃತಿಗಳಿಗೂ ಸುದೀರ್ಘವಾದ ಅಧ್ಯಯನಾತ್ಮಕ, ಸಂಶೋಧನಾತ್ಮಕ ಪೀಠಿಕೆ, ಪ್ರಸ್ತಾವನೆಗಳನ್ನೂ ಬರೆದು ವಿದ್ವಜ್ಜನರ ಪ್ರಶಂಸೆಗೆ ಪಾತ್ರರಾದರು. ಒಂದೊಂದು ಪೀಠಿಕೆ, ಪ್ರಸ್ತಾವನೆಗಳು ಪ್ರತ್ಯೇಕ ಕೃತಿಗಳಂತೆ ಇಂದಿಗೂ ಬೆರಗುಗೊಳಿಸುತ್ತವೆ. ಇವುಗಳ ಜೊತೆ ಜೊತೆಗೆ ಬರೆದ ಹಲವು ಬಗೆಯ ಪ್ರಬಂಧ, ಲೇಖನಗಳು ಇವರಲ್ಲಿರುವ ಸೃಜನಶೀಲ ಬರಹಕ್ಕಿಂತಲೂ ಹೆಚ್ಚಿನ ವೈಶಿಷ್ಟ್ಯವನ್ನು ಕಾಣಿಕೆಯನ್ನಾಗಿ ನೀಡುತ್ತವೆ. 'ಶಿವಶರಣೆ ಲಕ್ಕಮ್ಮ'ನನ್ನು ಕುರಿತ ಪುಸ್ತಕವಾಗಲಿ 'ಕನ್ನಡ ಹಸ್ತಪ್ರತಿಗಳ ಇತಿಹಾಸ' ಎಂಬ ಕೃತಿಯಾಗಲಿ ಅಲ್ಲಿ ನೀಡುವ, ಪ್ರಸ್ತಾಪಿಸುವ ಸಾಕಷ್ಟು ಮಾಹಿತಿಗಳು ಬೆರಗುಗೊಳಿಸುತ್ತವೆ.

**ಲಕ್ಕಣ್ಣದಂಡೇಶನ 'ಶಿವತತ್ತ್ವಚಿಂತಾಮಣಿ' (೧೯೭೪) :**

ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಪ್ರಚಾರೋಪನ್ಯಾಸಮಾಲೆಯೋಜನೆಯಡಿಯಲ್ಲಿ ಪ್ರಸ್ತುತ ಪಡಿಸಿದ ಮೂರು ಲೇಖನಗಳನ್ನು ಸಂಗ್ರಹಿಸಿ ಒಟ್ಟಾಗಿ ಪ್ರಕಟಿಸಿದ ಕೃತಿ. "ಕರ್ನಾಟಕದ ಎಲ್ಲ ಬಗೆಯ ಅಭಿವೃದ್ಧಿಗಾಗಿ ದುಡಿದು, ಕನ್ನಡದ ಬಾವುಟವನ್ನು ಬಾನೆತ್ತರಕ್ಕೆ ಏರಿಸಿದ ಕನ್ನಡದ ಕುಲದೀಪಕರು ಹಲವರುಂಟು. ಅವರಲ್ಲಿ ಎದ್ದುಕಾಣುವ, ಧೀಮಂತ, ಧೀರೋದಾತ್ತರ ಪಂಕ್ತಿಗೆ ಸೇರತಕ್ಕವನು ಲಕ್ಕಣ್ಣದಂಡೇಶ. ವಿಜಯನಗರದ ಇಬ್ಬರು ದೇವರಾಯರಲ್ಲಿ ಕ್ರಿ.ಶ. ೧೪೦೬ ರಿಂದ ೧೪೪೬ ರವರೆಗೆ ನಲವತ್ತೇಳು ವರ್ಷಗಳ ದೀರ್ಘಾವಧಿಯಲ್ಲಿ ಆ ಸಾಮ್ರಾಜ್ಯದ ಜೀವಸ್ವರೂಪನಾಗಿ ಬೆಳಗಿದವನೀತ. ಒಂದೇ ವ್ಯಕ್ತಿಯ ಮಹಾಮಾತ್ಯ, ಮಹಾಸೇನಾನಿ, ಮಹಾಕವಿ, ಮಹಾನುಭಾವಿ ಆಗಿ, ಎಲ್ಲ ಪಾತ್ರಗಳಲ್ಲಿಯೂ ಔನ್ನತ್ಯವನ್ನು ಸಾಧಿಸಿರುವ ನಿದರ್ಶನಗಳು ಪ್ರಪಂಚದ ಇತಿಹಾಸದಲ್ಲಿ ಕೆಲವೇ ಕೆಲವಿರುವುವು; ಅಂಥವರ ಬಳಗಕ್ಕೆ ಸೇರಿದನೀತ. ಕನ್ನಡಕ್ಕೊಬ್ಬನೆ ಲಕ್ಕಣ್ಣದಂಡೇಶನೆಂದರೂ ಸಲ್ಲುವುದು. 'ಶಿವತತ್ತ್ವಚಿಂತಾಮಣಿ' ಎಂಬ ಗ್ರಂಥ ಈತನು ಕನ್ನಡ ಜನತೆಗೆ ಕೊಟ್ಟಿರುವ ಶಾಶ್ವತ ಸಂಪತ್ತು."

ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ ಅನೇಕ ಐತಿಹಾಸಿಕ ಮಹತ್ವದ ಅಂಶಗಳನ್ನು ಒಳಗೊಂಡ ಶ್ರೇಷ್ಠ ಕೃತಿ. ಅಂದಿನ ಕಾಲದ ವಿಜಯನಗರದ ಜನಜೀವನವನ್ನು ಯಥಾವತ್ತಾಗಿ ಹಿಡಿದಿಟ್ಟಿರುವ ಹಾಗೂ ಶೈವ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಕೃತಿಯೆನಿಸಿದೆ. "ಮುಖ್ಯವಾಗಿ ಶಿವನ ಮತ್ತು ಶಿವಭಕ್ತರ

ಮಹಾತ್ಮ್ಯಗಳನ್ನು ವೀರಶೈವ ಸಿದ್ಧಾಂತವನ್ನು ಒಳಗೊಂಡಿರುವುದರಿಂದ ಇದಕ್ಕೆ ವೀರಶೈವದ ವಿಶ್ವಕೋಶ ಎಂದರೂ ಸಲ್ಲುವುದು" ಎಂದಿದ್ದಾರೆ, ಲೇಖಕರು. "೨೨೩೧ ವಾರ್ಧಕ ಷಟ್ಪದಿಗಳಿರುವ ೫೪ ಸಂಧಿಗಳಲ್ಲಿ ಈ ಬೃಹತ್ ಗ್ರಂಥಶಿಲ್ಪ ಪ್ರಮಾಣಬದ್ಧವಾಗಿ ಕಡೆಯಲ್ಪಟ್ಟಿದೆ. ಆಯಾ ವಿಷಯಕ್ಕೆ ಪ್ರಸಂಗಕ್ಕೆ ತಕ್ಕಷ್ಟೇ ಸ್ಥಾನವನ್ನೀಯಲಾಗಿದೆ. ಅನಾವಶ್ಯಕವಾಗಿ ಯಾವ ಅಂಗವೂ ಲಂಬಿಸಲ್ಪಟ್ಟಿಲ್ಲ. ಇದು ಲಕ್ಕಣ್ಣ ದಂಡೇಶನ ಔಚಿತ್ಯ ಪರಿಜ್ಞಾನದ ನಿದರ್ಶನ" ಎಂದಿದ್ದಾರೆ. ಇಲ್ಲಿನ ಮೂರು ಉಪನ್ಯಾಸಗಳಲ್ಲಿಯೂ ಲೇಖಕರು ಸಮಗ್ರವಾದ ಮಾಹಿತಿಗಳನ್ನು ನೀಡಿದ್ದಾರೆ.



'ಸಂಶೋಧನ ಸಂಪುಟ' ಬಿಡುಗಡೆ ಸಂದರ್ಭದಲ್ಲಿ (೧೯೬೪)

**ಸಂಶೋಧನ ಕೃತಿ :**

**ಸಂಶೋಧನ ಸಂಪುಟ (೧೯೬೪) :**

ಟಿ.ಎಸ್. ವೆಂಕಣ್ಣಯ್ಯ, ಬಿ.ಎಂ.ಶ್ರೀ, ತೀ.ನಂ.ಶ್ರೀ., ಡಿ.ಎಲ್.ಎನ್, ಎ.ಸೀ, ಎಂಆರ್, ವರದಾಚಾರ್ಯರಂತಹ ಶ್ರೇಷ್ಠ ಗುರುಪರಂಪರೆಯಲ್ಲಿ ಶಿಷ್ಯರಾಗಿ ಸಾಹಿತ್ಯಸೇವೆಯನ್ನು ಮಾಡಿಕೊಂಡು ಬಂದಿರುವ ಎಚ್. ದೇವೀರಪ್ಪನವರು ಉತ್ತಮ ಸಂಶೋಧಕರಲ್ಲೊಬ್ಬರು ಎಂಬುದರಲ್ಲಿ ಎರಡು ಮಾತಿಲ್ಲ. ನಾಲ್ಕೈದು ದಶಕಗಳ ಕಾಲ ಅವಿರತವಾಗಿ ಸಂಶೋಧನಾ ಕಾರ್ಯದಲ್ಲೇ ಮಗ್ನರಾಗಿದ್ದುಕೊಂಡು ಪ್ರಾಚೀನ ಕನ್ನಡ ಸಾಹಿತ್ಯದ ಆಳ ಅರಿವನ್ನು ಚೆನ್ನಾಗಿ ಬಲ್ಲವರಾಗಿ ವಿದ್ವತ್ತಿನ ಪ್ರತಿಭಾ, ಪಾಂಡಿತ್ಯದಲ್ಲಿ ತಮ್ಮ

ಇಡೀ ಬದುಕನ್ನು ಸಾಗಿಸಿಕೊಂಡು ಬಂದವರಾಗಿದ್ದಾರೆ. ಇವೆಲ್ಲದರ ಫಲವಾಗಿ 'ಸಂಶೋಧನ ಸಂಪುಟ' ಎಂಬ ಬೃಹತ್ ಕೃತಿಯನ್ನು ಕನ್ನಡ ಸಾಹಿತ್ಯದ ಸಂಶೋಧನಾಕ್ಷೇತ್ರಕ್ಕೆ ಕೊಡುಗೆಯಾಗಿ ಕೊಟ್ಟಿದ್ದಾರೆ.

ಈ ಕೃತಿಯಲ್ಲಿ ಒಟ್ಟು ಆರು ಭಾಗಗಳಿವೆ. ಕವಿಚರಿತೆ, ಕವಿಕಾವ್ಯ ವಿಚಾರ, ವಚನ ಸಂಪಾದನೆ, ಛಂದಸ್ಸು, ಶಬ್ದ ವಿವೇಕ ಹಾಗೂ ಸಂಕೀರ್ಣ ಭಾಗಗಳಲ್ಲಿ ಒಟ್ಟು ೫೧ ಲೇಖನಗಳಿವೆ. ಪ್ರತಿಯೊಂದು ಲೇಖನಗಳು ಕೂಡ ಇವರ ವಿದ್ವತ್ತಿನ ಸಾಮರ್ಥ್ಯವನ್ನು ಎತ್ತಿ ಹಿಡಿಯುತ್ತವೆ. ಭಾಗ ೧ ರ 'ಕವಿಚರಿತೆ'ಯಲ್ಲಿ ಶಿವಕೋಟ್ಯಾಚಾರ್ಯ, ನಾಗವರ್ಮ, ಜೇಡರ ದಾಸಿಮಯ್ಯ, ಬ್ರಹ್ಮಶಿವ, ತರಳಬಾಳು ಸಿದ್ಧೇಶ್ವರ ಮೊದಲಾದವರನ್ನು ಕುರಿತ ಕಾಲ, ದೇಶ, ಕೃತಿಗಳ ಬಗೆಗಿನ ಸಂಶೋಧನಾತ್ಮಕ ಚರ್ಚೆಯ ವಿಚಾರದಲ್ಲಿ ಗಂಭೀರವಾದ ಚಿಂತನೆ ನಡೆಸಿ ಉಪಯುಕ್ತ ಮಾಹಿತಿಗಳನ್ನು ಒದಗಿಸಿ ಕೊಟ್ಟಿದ್ದಾರೆ. ಇದರಲ್ಲೇ ಬರುವ ಹರಿಹರನ ರಗಳೆಗಳ ಸಂಖ್ಯಾ ನಿರ್ಣಯ, ಲಕ್ಕಣ್ಣದಂಡೇಶನು ಹೊಗಳಿರುವ ಕೆಲವು ಕವಿಗಳು, ಕವಿಕಥೆಯ ಹರಿಕಥೆ, ಕುಮಾರವ್ಯಾಸ ಭಾಸ್ಕರನ ಕಾಲವನ್ನು ಕುರಿತ ಲೇಖನಗಳು ಬಹಳಷ್ಟು ಚರ್ಚೆಗೆ ಆಸ್ಪದವೀಯುತ್ತವೆ.

'ಕವಿಕಾವ್ಯ ವಿಚಾರ' ಭಾಗದ ೧೦ ಲೇಖನಗಳಲ್ಲಿ ಹರಿಹರನ ಕಾವ್ಯಧರ್ಮ, ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಕುಮಾರವ್ಯಾಸನ ಇಂದ್ರಕೀಲ, ಮರುಳಸಿದ್ಧ ಚಾರಿತ್ರ, ವಿಜಯಮ್ಮಿ ಹೇಳಿದ ಬಸವ ಪುರಾಣ, ರಾಜಶೇಖರ ವಿಲಾಸ ಚೇರಮಕಥೆ, ಸರ್ವಜ್ಞನ ಬಗೆಗೆ ವಿಚಾರ, ಅವಿಚಾರ, ಅಪಪ್ರಚಾರ ಮುಂತಾದ ಲೇಖನಗಳು ಕವಿ ಕಾವ್ಯ ಚರಿತ್ರೆಗಳನ್ನು ಕುರಿತು ಬರೆದ ಸಮಗ್ರ ಮಾಹಿತಿಗಳನ್ನು ಒದಗಿಸಿ ಕೊಡುತ್ತದೆ.

ವಚನ ಸಂಪಾದನೆಯ ಭಾಗದಲ್ಲಿನ ಆರು ಲೇಖನಗಳು ಸಾಕಷ್ಟು ಚರ್ಚೆಗೆ ಗ್ರಾಸವಾಗಿವೆ. ಜೇಡರದಾಸಿಮಯ್ಯನ ವಚನಗಳು, ಬಸವರಾಜದೇವರ 'ಷಡುಸ್ಥಲ'ದ ವಚನಗಳು, ಕೆಲವು ಮಹತ್ವದ ವಚನಗಳು, ಬಸವಣ್ಣನವರ ಎರಡು ವಚನಗಳು ಕುರಿತಾದ ಸಂಶೋಧಕರ ದೃಷ್ಟಿಕೋನ ಹೊಸಬಗೆಯ ಚಿಂತನೆಗೆ ನಾಂದಿಹಾಡುತ್ತವೆ. ಛಂದಸ್ಸಿನ ಭಾಗದ ಮೂರು ಲೇಖನಗಳಲ್ಲಿ ಸಾಂಗತ್ಯ, ರಗಳೆ, ಶಾರದ ಎಂಬ ಹಾಡುಗಬ್ಬ ಇಲ್ಲೆಲ್ಲ- ಛಂದಸ್ಸಿನ ವೈವಿಧ್ಯಗಳನ್ನು ಸೋಧಾರಣವಾಗಿ ವಿವರಿಸಿದ್ದಾರೆ.

ಕವಿಶಬ್ದ ವಿವೇಕದ ಭಾಗದ ೮ ಲೇಖನಗಳಲ್ಲಿ ಶಬ್ದ ಉತ್ಪತ್ತಿ

ವಿಚಾರಗಳನ್ನು ಅನೇಕ ಮೂಲಗಳಿಂದ ಗ್ರಹಿಸಿ ಒಂದು ನಿರ್ಣಯಕ್ಕೆ ಬಂದಿದ್ದಾರೆ. ಇವರು ಪದ ಸಂಪತ್ತಿನ ಹೊಳಹಿನ ಬಗ್ಗೆ ಆಳವಾಗಿ ಯೋಚಿಸುತ್ತಾ ಪ್ರತಿಯೊಂದರ ಬಗ್ಗೆ ಗಮನಾರ್ಹ ವಿಚಾರಗಳನ್ನು ಮುಂದಿಡುತ್ತಾರೆ. ಜಾಣ, ಕರ್ಣಾಟಕವೊ> ಕರ್ನಾಟಕವೊ, ಮರುಳಯ್ಯನ್ > ಮಲ್ಲಿಕಾರ್ಜುನ, ನೆಲವತ್ತಿ; ಊರು ಮಾತ್ರ ಇದೆ. ಮುಂತಾದ ಲೇಖನಗಳು ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿವೆ.

ಸಂಕೀರ್ಣ ಭಾಗದಲ್ಲಿನ ೧೫ ಲೇಖನಗಳು ಬಹಳ ವೈಶಿಷ್ಟ್ಯ ಪೂರ್ಣವಾಗಿವೆ. ಶರಣರ ಬಗೆಗಿನ ಅಭಿಮಾನದಿಂದ ಅವರು ಅನೇಕ ಶರಣರ ಬಗ್ಗೆ ವಿವಿಧ ಬಗೆಯ ಲೇಖನ ಬರೆದಿದ್ದಾರೆ. ಸಿರಿಯಾಳ, ಅಲ್ಲಮ, ಲಕ್ಕಮ್ಮ, ಮರುಳಸಿದ್ಧ ಮುಂತಾದ ಶರಣರ ಜೊತೆಗೆ ಹೊಯ್ಸಳರ ಕೊಡುಗೆ, ಹಸ್ತಪ್ರತಿಗಳ ಇತಿಹಾಸ, ಲೌಕಿಕ ಶಾಸ್ತ್ರಗ್ರಂಥಗಳ ಚರ್ಚೆ, ಪಂಚಾಚಾರ್ಯರನ್ನು ಕುರಿತ ಮುಂತಾದ ಲೇಖನಗಳು ವಿದ್ವತ್ತಿನಿಂದ ಕೂಡಿದೆ. ಇಂತಹ ಒಂದು ಸಂಶೋಧನ ಗ್ರಂಥ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅತ್ಯಮೂಲ್ಯವಾದ ಕೊಡುಗೆಯಾಗಿದೆ.

ವ್ಯಕ್ತಿಚಿತ್ರ :

ಮೈಸೂರು ಬಸವಯ್ಯನವರು (೧೯೮೦–೧೯೮೫) :

ಈ ಕೃತಿಯನ್ನು ೨ ಭಾರಿ ಬರೆದಿದ್ದಾರೆ. ವೀರಶೈವ ಅಧ್ಯಯನ ಸಂಸ್ಥೆ ಡಂಬಳ–ಗದಗ ಇವರು ಪುಣ್ಯಪುರುಷರ ಮಾಲೆಯಲ್ಲಿ ಸಂಕ್ಷಿಪ್ತವಾಗಿ ಮೊದಲು ಪ್ರಕಟಿಸಿದ್ದಾರೆ. ನಂತರ 'ತರಳಬಾಳು ಪ್ರಕಾಶನ'ದ ಮೂಲಕ ಶ್ರೀತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ ಇವರು ವಿಸ್ತೃತರೂಪದಲ್ಲಿ ಪುನರ್ ಮುದ್ರಿಸಿ ಪ್ರಕಟಿಸಿದ್ದಾರೆ. ಮೈಸೂರು ಬಸವಯ್ಯನವರನ್ನು ಕುರಿತ ವ್ಯಕ್ತಿ ಚಿತ್ರಣ ಈ ಕೃತಿಯಲ್ಲಿದೆ. "ಸ್ವಾತಂತ್ರ್ಯ ಪೂರ್ವ ಕಾಲದಲ್ಲಿನ ಮೈಸೂರು ಮಹಾಸಂಸ್ಥಾನದಲ್ಲಿ 'ಬ್ರಹ್ಮದ್ವೇಷಿ'ಯೆಂದೇ ಕೆಲವರ ಆಕ್ರೋಶಕ್ಕೆ ಗುರಿಯಾಗಿದ್ದ ಬಸವಯ್ಯನವರು ಕನ್ನಡ ನಾಡಿನ ಅಂಬೇಡ್ಕರ್ ಆಗಿದ್ದಾರೆಂದರೆ ಅವರ ಹೋರಾಟದ ಸೂಕ್ಷ್ಮ ಪರಿಚಯ ಆಗದಿರದು. ದಟ್ಟದರಿದ್ರರಿಂದ ತತ್ತರಿಸಿದ, ಬೇಸಾಯದ ಬವಣೆಯಲ್ಲೆ ಬೆನ್ನು ಮುರಿಸಿಕೊಳ್ಳುವ ನಿರಕ್ಷರ ಕುಕ್ಷಿಗಳಾದ ಗ್ರಾಮೀಣ ಜನರ ಬದುಕನ್ನು ಮೇಲೆತ್ತಲು ಅವರು ಮಾಡಿದ ಸಾಹಸಕಾರ್ಯ ಇತಿಹಾಸದ ಪುಟಗಳಲ್ಲಿ ಒಂದು ಅವಿಸ್ಮರಣೀಯ ಅಧ್ಯಾಯ. ಹಿಂದುಳಿದವರ, ದೀನದಲಿತರ ಪರವಾಗಿ ಸಿಂಹಘರ್ಜನೆ ಮಾಡಿ ಸರ್ಕಾರದ

ಲೋಪದೋಷಗಳನ್ನು ಅಂದಿನ ಪ್ರಜಾಪ್ರತಿನಿಧಿ ಸಭೆಯ ಮತ್ತು ನ್ಯಾಯ ವಿಧೇಯಕ ಸಭೆಯ ಕಾರ್ಯಕಲಾಪಗಳಲ್ಲಿ ಖಂಡ-ತುಂಡವಾಗಿ ಪ್ರತಿಭಟಿಸುತ್ತಿದ್ದ ಬಸವಯ್ಯನವರು ಆಡಳಿತದ ಚುಕ್ಕಾಣಿ ಹಿಡಿದವರಿಗೆ ಸಿಂಹ ಸ್ವಪ್ನವಾಗಿದ್ದರು. ಅವರ ಈ ಧೀರೋದಾತ್ತ ವ್ಯಕ್ತಿತ್ವವನ್ನು ಅವರು ಗತಿಸಿದ ಐವತ್ತು ವರ್ಷದ ಮೇಲೆಯೂ ಗುರುತಿಸಿದವರೆಂದರೆ ನಮ್ಮ ಪರಮಾದರಣೀಯ ಗುರುಗಳಾದ ಹಿರಿಯ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರು. ಅವರ ಸಂಸ್ಮರಣೆಯಲ್ಲಿ ೧೯೬೯ನೆಯ ಇಸವಿಯಲ್ಲಿ ಎಂ ಬಸವಯ್ಯ ರೆಷಿಡೆನ್ಷಿಯಲ್ ಕಾಲೇಜೊಂದನ್ನು ಸ್ಥಾಪಿಸಿದರು. ಈಗ ಇದು ಎಂ. ಬಿ.ಆರ್. ಕಾಲೇಜಾಗಿದೆ. ಈ ಮೂರಕ್ಷರಗಳ ಹಿಂದಿನ ಮೈನವಿರೇಳಿಸುವ ಇತಿಹಾಸವೇನೆಂಬುದನ್ನು ಬಹಳ ಶ್ರಮವಹಿಸಿ ವಿಸ್ತೃತವಾಗಿ ಬರೆದುಕೊಟ್ಟಿರುವ ಶ್ರೀ ಹೆಚ್. ದೇವೀರಪ್ಪನವರು ಅಭಿನಂದನಾರ್ಹರು". ಹೀಗೆ ಶ್ರೀ ತರಳಬಾಳು ಜಗದ್ಗುರು ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು ಪುಸ್ತಕದ ಮುನ್ನುಡಿಯಲ್ಲಿ ಹೇಳಿದ್ದಾರೆ. ೩೨ ಅಧ್ಯಾಯಗಳಲ್ಲಿ ಈ ಕೃತಿ ರಚಿಸಲಾಗಿದೆ. ದೇವೀರಪ್ಪನವರು ತಮ್ಮ ಮಾವನರಾದ ಬಿ. ಬಸವಪ್ಪ (ನಿವೃತ್ತ ಸೂಪರಿಂಟೆಂಡೆಂಟ್ ಮೈಸೂರು ಪವರ್ ಅಂಡ್ ಲೈಟಿಂಗ್)ನವರು ತಮ್ಮ ಸಮೀಪದ ಬಂಧುವಾದ ಎಂ. ಬಸವಯ್ಯನವರ ವೃತ್ತಾಂತವನ್ನು ಸ್ವಾರಸ್ಯಕರವಾಗಿ ಹೇಳುತ್ತಿದ್ದುದನ್ನು ಕೇಳಿ ಬರೆದಿದ್ದಾರೆ ಎಂದಿದ್ದಾರೆ.

**ಹಂಪೆಯ ಹರಿಹರ (೧೯೮೭) :**

ದೇವೀರಪ್ಪನವರಿಗೆ ಹಂಪೆಯ ಹರಿಹರನೆಂದರೆ ಬಹಳಷ್ಟು ಅಭಿಮಾನ, ವಿಶ್ವಾಸ, ಆದರಗಳಿಂದ ನೋಡಿರುವುದೇ ಹೆಚ್ಚು. ಹರಿಹರನ ಎಲ್ಲರಗಳೆಗಳನ್ನು ಸಂಗ್ರಹಿಸಿರುವ ಇವರು ಹರಿಹರನನ್ನು ಕುರಿತಂತೆ ಎಷ್ಟು ಬರೆದರೂ ತೃಪ್ತಿಯಿಲ್ಲ. ಹಾಗಾಗಿ ಸಮಗ್ರ ಪರಿಚಯವನ್ನೇ ಆತನ ಬಗ್ಗೆ ಕಟ್ಟಿಕೊಡುತ್ತಾರೆ. ಸಾಹಿತ್ಯ ಅಕಾಡೆಮಿ ನವದೆಹಲಿ ಇವರಿಗಾಗಿ ಬರೆದು ಕೊಟ್ಟ 'ಹಂಪೆಯ ಹರಿಹರ' ಎಂಬ ಕೃತಿ ಹರಿಹರನ ಜೀವನ ಚರಿತ್ರೆ, ಕಾಲದ ವಿಚಾರ, ಕಾವ್ಯರಾಶಿ, ಕೃತಿಗಳ ವೈಶಿಷ್ಟ್ಯ, ರಗಳೆಗಳ ವೈವಿದ್ಯ, ಆತನ ಕೃತಿಗಳ ರಗಳೆ, ಛಂದಸ್ಸಿನ ಸೊಗಡು ಅಂದಿನ ಜೀವನ ಹಾಗೂ ಆತನ ವ್ಯಕ್ತಿತ್ವ ಮತ್ತು ಪ್ರಭಾವಗಳ ಬಗ್ಗೆ ಈ ಕೃತಿಯಲ್ಲಿ ಸಾಕಷ್ಟು ವಿಷಯ ಸಾಮಗ್ರಿಯೊಡನೆ ಮುಂದಿಡುತ್ತಾರೆ. ಒಂದು ರೀತಿಯಲ್ಲಿ ಹರಿಹರನ ಬಗ್ಗೆ ಆತನ ಕೃತಿ ಸಾಧನೆಗಳ ಬಗ್ಗೆ ಸಮಗ್ರವಾಗಿ ಬರೆದವರು ವಿರಳ. ಇದಕ್ಕೆ ದೇವೀರಪ್ಪನವರೇ ಅಧಿಕೃತ

ವ್ಯಕ್ತಿಯಾಗಿರುವುದೇ ಕಾರಣ. ಆದ್ದರಿಂದಲೇ 'ಹರಿಹರಪ್ರಿಯ ದೇವೀರಪ್ಪ' ಎಂದರೆ ತಪ್ಪಿಲ್ಲ.

**ಸಂಪಾದಿತ ಕೃತಿಗಳು :**

ದೇವೀರಪ್ಪನವರು ಸ್ವತಂತ್ರವಾಗಿ ಸಂಪಾದಿಸಿ ಕೊಟ್ಟಿರುವ ಕೃತಿಗಳು ಹನ್ನೆರಡು. ಈ ಒಂದೊಂದು ಕೃತಿಗಳೂ ಇವರ ಅಧ್ಯಯನ ಪ್ರಭುತ್ವಕ್ಕೆ ಸಾಕ್ಷಿ. ಸಿಂಗಿರಾಜ ಪುರಾಣ, ರಾಮನಾಥ ಚರಿತೆ ೨,೩, ಶರಣ ಚರಿತ ಮಾನಸಂ, ಬಸವರಾಜದೇವರ ರಗಳೆ, ಶಿವಶರಣಸಂಪುಟ, ಹರಿಹರ ವಿರಚಿತ ಅನೇಕ ರಗಳೆ ಕೃತಿಗಳು, Vachanas of Basavanna ಮೊದಲಾದ ಕೃತಿಗಳು ಸಂಪಾದನಾ ಕ್ಷೇತ್ರದಲ್ಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಗಳಿಸಿಕೊಂಡಿರುತ್ತವೆ.

**ಸಿಂಗಿರಾಜ ಪುರಾಣ (೧೯೫೦) :**

ಸಿಂಗಿರಾಜ ಕವಿಯು ವಾರ್ಧಕ ಷಟ್ಪದಿಯಲ್ಲಿ ರಚಿಸಿರುವ ಕಾವ್ಯ. ಪ್ರಾಚ್ಯ ವಿದ್ಯಾ ಸಂಶೋಧನಾ ಸಂಸ್ಥೆಯಿಂದ ಪ್ರಕಟವಾದ ಮೊಟ್ಟಮೊದಲ ಕೃತಿ. ಪರಶಿವನ ಅಪರಾವತಾರವಾದ ಬಸವೇಶ್ವರನು ಲೋಕ ಕಲ್ಯಾಣಕ್ಕಾಗಿ, ಭಕ್ತರ ಉದ್ಧಾರಕ್ಕಾಗಿ ಮೆರೆದ ಅರವತ್ತುನಾಲ್ಕು ಪವಾಡಗಳನ್ನು ನಿರೂಪಿಸಿರುವ ಬೃಹತ್ಕಾವ್ಯ. ಇದಕ್ಕೆ ಅಮಲ ಬಸವರಾಜ ಚಾರಿತ್ರ ಎಂಬ ಮತ್ತೊಂದು ಹೆಸರೂ ಇದೆ. ೪೮ ಸಂಧಿಗಳೂ ೧೯೦೭ ಪದ್ಯಗಳು ಇಲ್ಲಿವೆ.

**ರಾಮನಾಥ ಚರಿತೆ ೨, ೩ (೧೯೫೫, ೧೯೬೪) :**

ನಂಜುಂಡ ಕವಿ ವಿರಚಿತ ಸಾಂಗತ್ಯ ರೂಪದ ಕೃತಿಗಳು. "ಕುಮಾರರಾಮ ಸಾಂಗತ್ಯ" ಎಂಬ ಈ ರಾಮನಾಥ ಚರಿತವು ಕನ್ನಡ ಜನತೆಗೆ ತುಂಬ ಪರಿಚಯವುಳ್ಳ ಚೆಲುವುಕತೆ. ಇಂದಿಗೆ ಸುಮಾರು ಆರುನೂರು ವರ್ಷಗಳ ಹಿಂದೆ ಸುಪ್ರಸಿದ್ಧವಾಗಿದ್ದು, ಕನ್ನಡದ ದುರ್ಗಮಗಿರಿದುರ್ಗಗಳೆಂದು ಹೆಸರು ಪಡೆದಿದ್ದ ಕಮ್ಮಟದುರ್ಗ ಹೊಸ ಮಲೆದುರ್ಗಗಳನ್ನು ಒಳಗೊಂಡ ಕುಂತಳದೇಶಕ್ಕೆ ಒಡೆಯನಾಗಿದ್ದ ಕಂಪಿಲದೇವನ ಕುಲಪುತ್ರನಾದ ಕುಮಾರರಾಮು ಈ ಕತೆಯ ನಾಯಕ. ತನ್ನ ರೂಪಿಗೆ ಸೋತು ಮಲ ತಾಯಿಯ ಮೋಹಿಸಿಬರಲು, ತಾನು ಒಲ್ಲದಿರಲು, ಆ ತಾಯಿ ಮರೆತು ದೊರೆಯಲ್ಲಿ ಚಾಡಿಹೇಳಲು, ಘೋರ ಶಿಕ್ಷೆಯನ್ನು ಅನುಭವಿಸಿದ 'ಶುಚಿ'

ಈತ; ದುರ್ಗಕ್ಕೆ ದಾಳಿಯಿಟ್ಟು ದಿಳ್ಳಿಯ ದಂಡನ್ನು ಮೂರುಸಲ ಹಣಿದು ಓಡಿಸಿದ ಕನ್ನಡದ ಕಡುಗಲಿ. ಈ ವೀರನು ಇಂದೂ ಕನ್ನಡ ಜನತೆಯ ಪ್ರೀತಿಗೌರವ ಪೂಜೆಗಳಿಗೆ ಪಾತ್ರನಾಗಿದ್ದಾನೆ" ದೇವೀರಪ್ಪನವರು ನಾಡಿನಾದ್ಯಂತ ಹರಡಿ ಹಂಚಿಹೋಗಿದ್ದ ಹಲವಾರು ಹಸ್ತಪ್ರತಿಗಳನ್ನಿಟ್ಟುಕೊಂಡು ಅತ್ಯಂತ ಶ್ರದ್ಧೆ, ಪರಿಶ್ರಮ, ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ.

**ಶರಣ ಚರಿತಮಾನಸಂ (೧೯೬೮) :**

ಹರಿಹರನ ರಗಳೆಗಳ ಸಂಖ್ಯಾ ನಿರ್ಣಯ ಮಾಡುವ ಓನ್ನೆಲೆಯಲ್ಲಿ ಸಂಪಾದಿಸಿರುವ 'ಶರಣ ಚರಿತ ಮಾನಸಂ' ಕೃತಿ ಪ್ರಕಟವಾಗಿದೆ. ಈ ಕೃತಿಗೆ ಮುನ್ನುಡಿ ಬರೆದಿರುವ ಡಿ.ಎಲ್.ಎನ್ ಅವರು "ನನ್ನ ಮೆಚ್ಚಿನ ಕನ್ನಡ ಕವಿಗಳಲ್ಲಿ ಹರಿಹರ ಅಗ್ರಶ್ರೇಣಿಗೆ ಸೇರಿದವನಾಗಿದ್ದಾನೆ; ಅವನ ಕಾವ್ಯಗಳನ್ನು ಓದಿ ಓದಿಸಿ ಅನೇಕ ರಸನಿಮಿಷಗಳನ್ನು ಅನುಭವಿಸಿದ್ದೇನೆ. ಅವನ ಭಕ್ತಿಯ ಅವೇಶ ನನ್ನ ಹೃದಯವನ್ನು ಹೊಕ್ಕು ಅನುಭವದ ಅಲೆಗಳನ್ನು ಚಿಮ್ಮಿಸಿದೆ. ಸಂಪಾದಕರಾದ ಶ್ರೀಮಾನ್ ದೇವೀರಪ್ಪನವರು ಈ ಗ್ರಂಥದಲ್ಲಿರುವ ೨೪ ರಗಳೆಗಳಿಗೆ 'ಶರಣ ಚರಿತ ಮಾನಸಂ' ಎಂಬ ಹೆಸರನ್ನು ಕೊಟ್ಟಿದ್ದಾರೆ. ಹರಿಹರನು ತಾನು ಹೇಳಿದ ರಗಳೆಗಳ ಮೊತ್ತಕ್ಕೆ ಇಟ್ಟ ಹೆಸರೇನೋ ಗೊತ್ತಾಗಿ ತಿಳಿದು ಬಂದಿಲ್ಲ. ಪುರಾತನರ ರಗಳೆಗಳು, ಅರವತ್ತುಮೂರು ರಗಳೆಗಳು ಇತ್ಯಾದಿಯಾದ ಹೆಸರುಗಳಿದ್ದಿರಬಹುದು. ತ್ರಿಷಷ್ಠಿ ಪುರಾತನರ ವಿಳಾಸ ಎಂದೇ ಕರೆದಿರಬಹುದು. ಒಟ್ಟಿನಲ್ಲಿ ಅವನೇನು ಹೆಸರಿಟ್ಟಿದ್ದಾನೋ ಅದು ಸಾಮ್ರಾಜ್ಯಕ್ಕೆ ಸೇರಿದ್ದು. ಈಗ ಈ ರಗಳೆಗಳಿಗೆ ಇಟ್ಟಿರುವ ಹೊಸ ಹೆಸರು ರಮ್ಯವಾಗಿದೆ. ಶಿವಶರಣರ ಲೀಲಾವಿಲಾಸವುಳ್ಳ ಮಾನಸ ಸರೋವರವಾಗಿದೆ. ಸುಮಾರು ೧೯೧ ಪುಟಗಳಷ್ಟು ದೀರ್ಘವಾದ ಪೀಠಿಕೆಯನ್ನು ರಚಿಸಿ ಅಭ್ಯಾಸಿಗಳಿಗೆ ಸಂಪಾದಕರು ಸಹಾಯ ಮಾಡಿದ್ದಾರೆ. ಅದರಲ್ಲಿ ಕವಿ ಪರಿಚಯ, ಹರಿಹರನು ರಚಿಸಿರುವ ರಗಳೆಗಳ ಸಂಖ್ಯಾ ನಿರ್ಣಯ, 'ಅರವತ್ತು ಮೂವರ ಕಥಾಗರ್ಭ' ಎಂಬುದರ ಕರ್ತೃತ್ವ ವಿಚಾರ ಹರಿಹರ ಕೃತ ರಘಟಾ ಕೃತಿಗಳ ಸಾಮಾನ್ಯ ಲಕ್ಷಣಗಳು, ತಿರುನೀಲಕಂಠ ಮುಂತಾದ ೨೪ ಭಕ್ತರ ಕಥಾ ನಿರೂಪಣೆ, ಕೃತಿ ಪರೀಕ್ಷಣ ಎಂಬ ವಿಮರ್ಶೆಯ ಭಾಗ, ವರ್ಣನೆಗಳು, ಶೈಲಿ, ರಗಳೆಯ ಛಂದಸ್ಸಿನ ವಿಚಾರ, ರಗಳೆಗಳಲ್ಲಿ ಕಾಣುವ ಜನಜೀವನ ಇತ್ಯಾದಿ ವಿಷಯಗಳ ವಿದ್ವತ್ಪೂರ್ಣವಾದ, ಹೃದಯಂಗಮವಾದ ನಿರೂಪಣೆ ಇದೆ. ಈ ಪೀಠಿಕೆ ಒಂದು ಸ್ವತಂತ್ರ ಗ್ರಂಥದ ಮೌಲ್ಯವನ್ನುಳ್ಳದ್ದಾಗಿದೆ" ಎಂದಿದ್ದಾರೆ. ದೇವೀರಪ್ಪನವರು ಸಂಪಾದಿಸಿ

ಕೊಟ್ಟಿರುವ ಈ ಕೃತಿ ಕನ್ನಡಿಗರಿಗೆ ನೀಡಿದ ಅತ್ಯಮೂಲ್ಯ ಕೊಡುಗೆಯಾಗಿದೆ.

**ಬಸವರಾಜದೇವರ ರಗಳೆ (೧೯೮೧) :**

ಬಸವತತ್ತ್ವ ಪ್ರಚಾರದಲ್ಲಿ ಬಸವಣ್ಣನವರನ್ನು ಕುರಿತು ಶರಣಕವಿಗಳು ರಚಿಸಿದ ಕಾವ್ಯಗಳು ಬಹಳ ಮಹತ್ವಪೂರ್ಣವಾಗಿವೆ. ಇಂಥ ಕಾವ್ಯಗಳಲ್ಲಿ ಹರಿಹರನ ಬಸವರಾಜದೇವರ ರಗಳೆ ಅಗ್ರಸ್ಥಾನದಲ್ಲಿದೆ. ಬಸವಣ್ಣನವರನ್ನು ಕುರಿತು ಬರೆದ ಮೊಟ್ಟಮೊದಲ ಕವಿಯೆಂದರೆ ಹರಿಹರ.

"ಹಂಪೆಯ ಹರಿಹರ ಕವಿವರ, ಭಕ್ತಾಗ್ರೇಸರ, ಸಾಕ್ಷಾತ್ ವಿರೂಪಾಕ್ಷ ಕುಮಾರ, ಕ್ರಾಂತಿಯ ಹರಿಕಾರ, ಅವರ 'ಬಸವರಾಜದೇವರ ರಗಳೆ' ಕಿರಿಯ ಗಾತ್ರದ ಹಿರಿಯ ಕೃತಿ. ಕರತಲದ ಮಹಾಕಾವ್ಯ. ಅನನ್ಯ ಲಾವಣ್ಯದ ಕಾವ್ಯ ಸುಂದರಿ. ಇದರ ಸವಿಮರ್ಶೆ ಸಂಪಾದನೆ ಎಚ್. ದೇವೀರಪ್ಪನವರ ಮಹತ್ಸೇವೆಗಳಲ್ಲಿ ಒಂದು. ಇದಕ್ಕೆ ಅವರು ಜೋಡಿಸಿರುವ ಸುದೀರ್ಘ ಪ್ರಸ್ತಾವನೆ ಅವರ ಸಾಹಿತ್ಯ ಕಲಾಭಿಜ್ಞತೆಗೆ, ವಿಮರ್ಶಾ ನೈಪುಣ್ಯಕ್ಕೆ, ಮೌಲ್ಯಮಾಪನ ಪ್ರಾವೀಣ್ಯಕ್ಕೆ ಹಿಡಿದ ಕನ್ನಡಿ. ಹರಿಹರನ ಚರಿತ್ರೆ, ಕಾಲ, ಕೃತಿರಾಶಿ, ಬಸವರಾಜದೇವರ ರಗಳೆಯ ಕಾವ್ಯವಿಸ್ತಾರ, ಹರಿಹರನ ಬಸವಣ್ಣ, ಮೂಲಸಾಮಗ್ರಿ, ಇತ್ಯಾದಿ ಭಾಗಗಳಂತೂ ಬಸವಾನುಯಾಯಿಗಳು, ಬಸವಾಭಿಮಾನಿಗಳು ಅವಲೋಕಿಸಲೇಬೇಕಾದ ಭಾಗಗಳಾಗಿವೆ" ಎಂದು ಡಾ. ಸಿದ್ದಯ್ಯ ಪುರಾಣಿಕರು ಎರಡನೆಯ ಮುದ್ರಣದ ಸಂದರ್ಭದಲ್ಲಿ ಹೇಳಿರುವ ಮಾತುಗಳು ಅರ್ಥಪೂರ್ಣವಾಗಿವೆ.

ಈ ಕೃತಿಯ ಕಥಾಸಾರ ಇಷ್ಟೆ; "ಕೈಲಾಸದಲ್ಲಿ ಶಿವನ ಒಡ್ಡೋಲಗದಲ್ಲಿದ್ದ ವೃಷಭಮುಖನೆಂಬ ಗಣೇಶ್ವರನು ಶಿವನೇ ಮಾಡಿದ ಮಾಯೆಯ ಪ್ರಭಾವದಿಂದ ಪಂಕ್ತಿಭೇದ ಮಾಡಿದುದು, ಹಾಗೆ ಮಾಡಿಯೂ ಮಾಡಿಲ್ಲವೆಂದು ಸುಳ್ಳು ಹೇಳುವುದು, ಅದೇ ನೆಪವಾಗಿ ಶಿವನು ಅವನನ್ನು ಭೂಲೋಕಕ್ಕೆ ಕಳುಹಿಸುವುದು, ಆತನು ಬಾಗೇವಾಡಿಯಲ್ಲಿ ಹುಟ್ಟಿ ಬಸವನೆಂಬ ಹೆಸರು ಧರಿಸಿ ಬೆಳೆದು, ಅಲ್ಲಿಂದ ಕಪ್ಪಡಿಯ ಕೂಡಲ ಸಂಗಮಕ್ಕೆ ಹೋಗಿ 'ಸಂಗನ ಬಸವನಾದುದು, ಅನಂತರ ಮಂಗಳವಾಡಕ್ಕೆ ಹೋಗಿ ದಂಡನಾಥ ಪದವಿಯಲ್ಲಿದ್ದರೂ ಜಂಗಮ ಪ್ರಾಣಿಯಾಗಿ ಧರಣೀತಳದಲ್ಲಿ ಮೆರೆದುದು, ಕಡೆಗೆ ಮಾಯೆಯನ್ನು ಗೆದ್ದು ಬದುಕಿದುದು– ಇಷ್ಟೇ ಈ ಕಾವ್ಯದ ರೂಪರೇಷೆ". ಪ್ರಥಮ ಸ್ಥಲದಿಂದ ತ್ರಯೋದಶಸ್ಥಲದವರೆಗೂ ಕಾವ್ಯದ ಹರಹು ಇದೆ.

'ಬಸವರಾಜ ದೇವರರಗಳೆ'ಯನ್ನು ಓದಿದೆ. ಬಹಳ ಸೊಗಸಾದ ಗ್ರಂಥ.

ಏನು ಗದ್ಯದ ಶೈಲಿ, ಏನು ಪದ್ಯದ ಸರಳತೆ ! ನಾನು ಅದನ್ನು ನಮ್ಮ ಕನ್ನಡದ ಅತ್ಯುತ್ತಮ ಗ್ರಂಥಗಳಲ್ಲಿ ಒಂದನ್ನಾಗಿ ಭಾವಿಸುತ್ತೇನೆ...'

–ಶ್ರೀ ಕುವೆಂಪು (ನೆನಪಿನ ದೋಣಿಯಲ್ಲಿ. ಪು. ೯೨೯)

**ಶಿವಶರಣ ಸಂಪುಟ (೧೯೭೩) :**

"ಶ್ರೀ ವಿರೂಪಾಕ್ಷಾಂಕಿತವುಳ್ಳ ನಲವತ್ತೆರಡು ಕಥನಾತ್ಮಕ ರಗಳೆಗಳು ಈ ಸಂಪುಟದಲ್ಲಿ ಸಮಾವೇಶಗೊಂಡಿರುತ್ತವೆ. ಇವುಗಳಲ್ಲಿ 'ಅರವತ್ತು ಮೂವರು ಪುರಾತನರು' ಎಂದು ಪ್ರಸಿದ್ಧವಾಗಿರುವ ತಮಿಳುನಾಡಿನ ಶಿವಭಕ್ತರ ಕಥೆಗಳು ಮೂವತ್ತೇಳು, ಅದೇ ನಾಡಿನ, ಪುರಾತನರ ಪಂಕ್ತಿಗೇ ಸೇರಿಸಬಹುದಾದ ಶಿವಭಕ್ತರ ಕಥೆಗಳು ಮೂರು, ಕನ್ನಡನಾಡಿನವರೇ ಆಗಿರುವ ಅಮ್ಮವ್ವೆ ಮತ್ತು ಹೇರೂರ ಹೆಂಗೂಸಿನ ಕಥೆಗಳೆರಡು ಇರುವುದರಿಂದ ಈ ಗ್ರಂಥಕ್ಕೆ 'ಶಿವಶರಣ ಸಂಪುಟ' ಎಂದು ಹೆಸರಿಟ್ಟದೆ.

ಈಗಾಗಲೇ ಪ್ರಕಟಗೊಂಡಿರುವ ಹಂಪೆಯ ಹರಿಹರ ದೇವರ 'ಶರಣ ಚರಿತ ಮಾನಸಂ' ಎಂಬ ಸಂಪುಟದಲ್ಲಿ ಇಪ್ಪತ್ತು ಮೂವರು ಪುರಾತನರನ್ನು ಮಾದರ ಚೆನ್ನಯ್ಯನನ್ನೂ ಕುರಿತ ಇಪ್ಪತ್ತನಾಲ್ಕು ರಗಳೆಗಳಿವೆ. ಅದಕ್ಕೆ ಪೂರಕವೆನ್ನಬಹುದಾದ ಈ ಸಂಪುಟದಲ್ಲಿನ ಎಲ್ಲ ಕಥನಗಳೂ ಹಲವಾರು ಹಸ್ತಪ್ರತಿಗಳ ಆಧಾರದಿಂದ ಶಾಸ್ತ್ರೀಯವಾಗಿ ಸಂಪಾದಿಸಲ್ಪಟ್ಟು ಸಮುಚಿತವಾದ ಪೀಠಿಕೆ, ಟಿಪ್ಪಣಿ ಇತ್ಯಾದಿಗಳೊಂದಿಗೆ ಪ್ರಕಟವಾಗುತ್ತಿರುವುದು ಇದೇ ಮೊದಲು. ತಮಿಳು ವರಸೆಯ ಪುರಾತನ ಚರಿತಗಳು ಆದಷ್ಟು ಸಮಗ್ರವಾಗಿ ಸವಿವರವಾಗಿ ನಿರೂಪಿತವಾಗಿರುವುದು ಈ ಗ್ರಂಥದ್ವಯದಲ್ಲಿ ಮಾತ್ರ" ಎಂದು ಸಂಪಾದಕರು ಪೀಠಿಕೆಯ ಭಾಗದಲ್ಲಿ ಹೇಳಿದ್ದಾರೆ. ೧೨೯ ಪುಟಗಳಷ್ಟು ದೀರ್ಘವಾದ 'ಪೀಠಿಕೆ'ಯನ್ನು ಬರೆದು ಒಂದೊಂದು ರಗಳೆಯ ಬಗ್ಗೆಯೂ ಮಾಹಿತಿಯನ್ನು ಒದಗಿಸಿಕೊಟ್ಟಿದ್ದಾರೆ. ೧೯೭೩ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಕಟಣ ಮತ್ತು ಪ್ರಚಾರೋಪನ್ಯಾಸಮಾಲೆಯುಡಿಯಲ್ಲಿ ಈ ಪುಸ್ತಕವನ್ನು ಹೊರತರಲಾಗಿದೆ.

ಹರಿಹರನ ಬಹುತೇಕ ರಗಳೆಗಳನ್ನು ದೇವೀರಪ್ಪನವರು ಸಂಪಾದಿಸಿ ಪ್ರಕಟಿಸಿರುವುದರ ಜೊತೆಗೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಅಭ್ಯಾಸದ ಅನುಕೂಲಕ್ಕಾಗಿ ಬೇರೆ ಬೇರೆಯಾಗಿಯೂ ಪ್ರಕಟಿಸಿರುತ್ತಾರೆ. ಹರಿಹರ ಮಹಾ ಕವಿಯ 'ಐದುರಗಳೆಗಳು' 'ಎಂಟು ರಗಳೆಗಳು' 'ಮೂವರು ಪುರಾತನರು' 'ಮಹಾದೇವಿಯರ ರಗಳೆ' 'ಇಪ್ಪತ್ತು ರಗಳೆಗಳು' ಎಂಬುದಾಗಿ

ಕೃತಿಗಳ ಪ್ರಕಟಣೆ ಮಾಡಿದ್ದಾರೆ. ಕೆಲವನ್ನು ಗದ್ಯಾನುವಾದ ಸಹಿತವಾಗಿ ಕೊಟ್ಟಿದ್ದಾರೆ. ಇಂಗ್ಲೀಷಿನಲ್ಲಿ ಸಂಪಾದಿಸಿ ಪ್ರಕಟಿಸಿರುವ Vachanas of Basavanna ಕೃತಿ ತುಂಬ ಮಹತ್ವದ ಪುಸ್ತಕ. ಬಸವಣ್ಣನವರ ೯೫೮ ವಚನಗಳನ್ನು ಮೊಟ್ಟ ಮೊದಲ ಬಾರಿಗೆ ಇಂಗ್ಲೀಷಿಗೆ ಅನುವಾದಿಸಲಾಗಿದೆ. ಇದರ ಅನುವಾದಕರು ಪ್ರೊ. ಎಲ್.ಎಂ.ಎ. ಮೆನ್‌ಜೇಸ್ ಮತ್ತು ಎಸ್.ಎಂ. ಅಂಗಡಿ ಅವರು. ಪ್ರೊ, ಸ.ಸ.ಬಸವನಾಳರು ಸಂಪಾದಿಸಿರುವ ಬಸವಣ್ಣನವರ ವಚನಗಳನ್ನು ಮೂಲವಾಗಿಟ್ಟುಕೊಳ್ಳಲಾಗಿದೆ. ತರಳಬಾಳು ಜಗದ್ಗುರುಗಳಾದ ಶ್ರೀ ಶಿವಕುಮಾರ ಸ್ವಾಮಿಗಳ ದೀರ್ಘವಾದ ಉಪೋದ್ಘಾತದೊಂದಿಗೆ, ಅಣ್ಣನ ಬಳಗ, ಸಿರಿಗೆರೆ ವತಿಯಿಂದ ೧೯೬೭ ರಲ್ಲಿ ಈ ಕೃತಿ ಹೊರಬಂದಿದೆ.

### ಇತರ ವಿದ್ವಾಂಸರೊಂದಿಗೆ ಸಂಪಾದಕರಾಗಿ :

ದೇವೀರಪ್ಪನವರು ಸ್ವತಂತ್ರವಾಗಿ ಸಂಪಾದಿಸಿ ಪ್ರಕಟಿಸಿದ ಕೃತಿಗಳ ಜೊತೆಗೆ ಇತರ ವಿದ್ವಾಂಸರೊಂದಿಗೂ ಸೇರಿ ಅನೇಕ ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಮುಖ್ಯವಾಗಿ ಡಾ. ದೇ.ಜವರೇಗೌಡ ಅವರೊಂದಿಗೆ 'ಗಿರಿಜಾ ಕಲ್ಯಾಣ ಮಹಾಪ್ರಬಂಧಂ' (ಚಂಪೂಕಾವ್ಯ-೧೯೫೭), 'ಅಜಿತ ತೀರ್ಥಂಕರರ ಪುರಾಣ ಸಂಗ್ರಹ' (ಚಂಪೂಕಾವ್ಯ-೧೯೫೯) ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಜನ್ನಕವಿಯ 'ಅಜಿತನಾಥ ಪುರಾಣಂ' (೧೯೭೦) ವನ್ನು ಎಂ.ಸಿ. ಪದ್ಮನಾಭ ಶರ್ಮ ಅವರೊಡನೆ, 'ಜೇಡರ ದಾಸಿಮಯ್ಯನ ವಚನಗಳು' (೧೯೭೪) ಅನ್ನು ಆರ್. ರಾಚಪ್ಪ ಅವರೊಡನೆ, ಕುಮಾರ ವ್ಯಾಸ ಕವಿಯ 'ಇಂದ್ರಕೀಲ' (೧೯೫೯)ವನ್ನು ಮೇ. ರಾಜೇಶ್ವರಯ್ಯನವರೊಡನೆ, 'ವಿಶ್ವಬಂಧು ಮರುಳಸಿದ್ಧ ಹಾಗೂ ಆತನ ಪರಂಪರೆ' (೧೯೭೪) ಯನ್ನು ಮಹಾದೇವ ಬಣಕಾರ ಅವರೊಡನೆ', 'ಚನ್ನವೀರ ಜಂಗಮದೇವ ವಿರಚಿತ ಷಟ್ಸ್ಥಲ ವಲ್ಲಭ' (೧೯೮೦) ವನ್ನು ಚನ್ನಪ್ಪ ಎರೇಸೀಮೆ ಅವರೊಡನೆ', 'ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು' (೧೯೮೩) ಅನ್ನು ಚನ್ನಪ್ಪ ಎರೇಸೀಮೆ ಅವರೊಡನೆ ಸಂಪಾದಿಸಿ ಪ್ರಕಟಿಸಿದ್ದಾರೆ. ಹಲವಾರು ಸಂಘ ಸಂಸ್ಥೆಗಳ ಸದಸ್ಯರಾಗಿಯೂ ವಿಶ್ವವಿದ್ಯಾಲಯ ಪಠ್ಯಪುಸ್ತಕ ಸಮಿತಿ ಮೊದಲಾದ ಸಂಸ್ಥೆಗಳ ಸದಸ್ಯರಾಗಿಯೂ, ಅಧ್ಯಕ್ಷರಾಗಿಯೂ ಕೆಲಸ ಮಾಡಿರುವ ಇವರು ಕೇರಳ ಸರ್ಕಾರದ ಪಠ್ಯಪುಸ್ತಕ ಸಮಿತಿಯ ವತಿಯಿಂದ ಕಾಸರಗೋಡಿನ ಕನ್ನಡ ಶಾಲೆಯ ಮಕ್ಕಳಿಗಾಗಿ 'ಸವಿಗನ್ನಡ ಪಾಠಮಾಲೆ'ಯ (೧ ರಿಂದ

೧೦ ನೇ ತರಗತಿವರೆಗೆ) ಪುಸ್ತಕಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಇದಲ್ಲದೆ 'ಕಾವ್ಯ ಸೌಂದರ್ಯ' (೧೯೭೮) ವನ್ನು, ೧೯೭೪ ರಲ್ಲಿ ಬೆಂಗಳೂರಿನಲ್ಲಿ ನಡೆದ 'ತರಳಬಾಳು ಹುಣ್ಣಿಮೆ' ಸಂದರ್ಭದಲ್ಲಿ 'ಬೆಂಗಳೂರು ತರಳಬಾಳು ಹುಣ್ಣಿಮೆ ಮಹೋತ್ಸವದ ಸ್ಮರಣ ಸಂಚಿಕೆ'ಯನ್ನು ಸಂಪಾದಿಸಿ ಕೊಟ್ಟಿದ್ದಾರೆ. ಈ ಎಲ್ಲ ಕಡೆಯೂ ಇವರ ಸಂಪಾದನ ಕಾರ್ಯವೈಖರಿ ಬಹಳಷ್ಟು ಅಚ್ಚುಕಟ್ಟುತನದಿಂದ ಕೂಡಿದ್ದು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುವಷ್ಟು ತಾಜಾತನವನ್ನು ಉಳಿಸಿಕೊಂಡಿರುವುದು ಗಮನಾರ್ಹ ಸಂಗತಿ.

**ಇನ್ನೂ ಕೆಲವು ಕೃತಿಗಳ ಅವಲೋಕನ :**

**ಕುಮಾರವ್ಯಾಸನ 'ಇಂದ್ರಕೀಲ' (೧೯೫೯) :**

ಮೇ ರಾಜೇಶ್ವರಯ್ಯನವರೊಂದಿಗೆ ಸಂಪಾದಿಸಿ ಪ್ರಕಟಿಸಿರುವ ಕೃತಿ 'ಇಂದ್ರಕೀಲ'. ಇದು ಗದುಗಿನ ಭಾರತವೆಂದು ಪ್ರಸಿದ್ಧವಾಗಿರುವ 'ಕರ್ನಾಟಕ ಭಾರತ ಕಥಾ ಮಂಜರಿ'ಯ ಒಂದು ಭಾಗ. ಇದರ ಕರ್ತೃ ಕುಮಾರವ್ಯಾಸ ಮಹಾಕವಿ.

'ಇಂದ್ರಕೀಲ'ದ ಕಥೆ ಸುಪ್ರಸಿದ್ಧವಾದುದು. ಪಂಡಿತ ಪಾಮರರಿಬ್ಬರ ಮೆಚ್ಚುಗೆಗೂ ಪಾತ್ರವಾದುದು. ಅತ್ಯುನ್ನತ ಮಟ್ಟದ ವೈದಗ್ಧ್ಯ ಪರಿಪೂರ್ಣವಾದ ಕಾವ್ಯಕ್ಕೂ ಇದು ಕಥಾ ಸಾಮಗ್ರಿ. ಶಿವ ಪುರಾಣೋಕ್ತ ಪಂಚವಿಂಶತಿ ಲೀಲೆಗಳಲ್ಲಿ ಒಂದೆಂದು, ಭಾರತದ ಕಾವ್ಯ ಕಥಾ ಪ್ರಪಂಚದಲ್ಲಿ ಗಣ್ಯ ಸ್ಥಾನ ಪಡೆದಿರುವುದು ಸಹಜವೆ. ಕ್ಷತ್ರಿಯ ವೀರನೊಬ್ಬನು ಮೂರು ಲೋಕದ ಒಡೆಯನಾದ ಮುಕ್ಕಣ್ಣನೊಡನೆ ಸೆಣಸಿ, ಅಸ್ತ್ರಯುದ್ಧ ಮಲ್ಲಯುದ್ಧ ಮುಷ್ಟಿಯುದ್ಧ ಮಾಡಿ ಅಪ್ರತಿಮ ಪಣಕ್ರಮದಿಂದಲೂ ಅನನ್ಯ ಭಕ್ತಿಯಿಂದಲೂ ಅವನನ್ನೂ ಒಲಿಸಿ, ತನಗೆ ಬೇಕಾದ ವರವನ್ನು ಪಡೆದು (ಕಸಿದು)ಕೊಂಡು ಬಂದ ಕಥೆ ಎಲ್ಲ ಕಾಲಕ್ಕೂ ಯಾವ ದೇಶದಲ್ಲಿಯೂ ರೋಮಾಂಚನಕಾರಿಯಾದುದೆ. ಮಹಾಭಾರತ ಯುದ್ಧದಲ್ಲಿ ಪಾಂಡವರು ವಿಜಯಶಾಲಿಗಳಾದರು ತಾನೆ, ಅವರ ವಿಜಯಶ್ರೀಯ ಮೂಲ ಇರುವುದು 'ಇಂದ್ರಕೀಲ ಪ್ರಸಂಗ'ದಲ್ಲಿ ಅಷ್ಟೇ ಅಲ್ಲ ; ಪುರುಷ ಪ್ರಯತ್ನದ ಈ ಪ್ರಾಧಾನ್ಯವನ್ನು, ಈಶಕಾರುಣ್ಯದ ಪ್ರಭಾವವನ್ನು ಅಲ್ಲಿ ಕಾಣಬಹುದು. ಈ ಪ್ರಸಂಗ ನಡೆದುದು ಇಂದ್ರಕೀಲದಲ್ಲಿ; ಆದುದರಿಂದ ಈ ಕಾವ್ಯ ಭಾಗವನ್ನು ಅದೇ ಹೆಸರಿನಿಂದ

ಕರೆಯುಲಾಗಿದೆ."

"ಈ ಕಥನವನ್ನು ಮೂರು ಪರ್ವಗಳಾಗಿ ವಿಂಗಡಿಸಬಹುದು. ದೈತ್ಯಕಾನನಕ್ಕೆ ಬಂದ ಪಾಂಡವರು ದೂತಮುಖದಿಂದ ಕೌರವರಾಯನ ವೈಭವವನ್ನು ಕೇಳಿ ಯೋಚನೆಗೀಡಾಗಿರಲು ಅಲ್ಲಿಗೆ ವೇದವ್ಯಾಸರು ಆಗಮಿಸಿ ಈಶ್ವರ ಮಂತ್ರೋಪದೇಶವಿತ್ತು ಹೋದುದು ; ಅರ್ಜುನನು ಇಂದ್ರಕೀಲಕ್ಕೆ ಹೋಗಿ ಇಂದ್ರದೇವನ ಹರಕೆಯನ್ನು ಪಡೆದು ಪುನೀತನಾಗಿರುವುದು – ಒಂದನೆಯ ಘಟ್ಟ. ಇವನ ತಪೋಜ್ವಾಲೆಯುನ್ನು ತಾಳಲಾರದ ಮುನಿಗಳು ಶಿವನ ಸಾನ್ನಿಧ್ಯದಲ್ಲಿ ಮೊರೆಯಿಡಲು ಶಿವನು ಅವರಿಗೆ ಅಭಯ ಪ್ರಧಾನ ಮಾಡಿ ಕಳುಹಿಸುವುದು ; ಶಿವನೂ ಅವನ ಪರಿವಾರವೂ ಕಿರಾತವೇಷದಲ್ಲಿ ಅರ್ಜುನನಿದ್ದ ಪ್ರದೇಶಕ್ಕೆ ಬರುತ್ತಿರುವುದು ; ಮಹಾ ವರಾಹನ ವೃತ್ತಾಂತ – ಇದು ಎರಡನೆಯ ಘಟ್ಟ. 'ಕಿರಾತ'ನಿಗೂ ಪಾರ್ಥನಿಗೂ ಕಾಳಗವಾಗಿ ಕೊನೆಗೆ ಪಾರ್ಥನು ಶಿವಲಿಂಗ ಪೂಜೆಯನ್ನು ಮಾಡಲು ಶಿವನು ಶಿವೆಯೂ ಶಿವನವರೂ ನಿಜರೂಪಿನಲ್ಲಿ ಕಾಣಿಸಿಕೊಂಡು ಆತನ ಇಷ್ಟಾರ್ಥವನ್ನೂ ನೇರವೇರಿಸುವುದು – ಇದು ಅಂತಿಮ ಘಟ್ಟ."

ಕವಿಯ ವ್ಯಾಸಭಾರತವನ್ನೇ ಮುಖ್ಯವಾಗಿ ಅನುಸರಿಸಿದ್ದರೂ ಅಲ್ಲಲ್ಲಿ ಕೆಲವು ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿಕೊಂಡಿರುತ್ತಾನೆ.

ಒಟ್ಟಿನಲ್ಲಿ ಸುಪ್ರಸಿದ್ಧರಾದ 'ಇಂದ್ರಕೀಲ' ಮಹಾಕವಿ ಕುಮಾರವ್ಯಾಸನ ಪರುಷ ಹಸ್ತ ಪ್ರಭಾವದಿಂದ ಇನ್ನಷ್ಟು ಮೆರಗುವಡೆದು ಕನ್ನಡ ಕಾವ್ಯಲೋಕದಲ್ಲಿ ಅತ್ಯಂತ ಪ್ರಧಾನವಾದ ಶಾಶ್ವತ ಸ್ಥಾನವನ್ನು ಪಡೆದಿದೆ. ಇಂತಹ ಕೃತಿಯನ್ನು ದೇವೀರಪ್ಪನವರು ಇತರರೊಂದಿಗೆ ಸಂಪಾದಿಸಿಕೊಟ್ಟಿದ್ದಾರೆ.

**ವಿಶ್ವಬಂಧು ಮರುಳಸಿದ್ಧ ಹಾಗೂ ಆತನ ಪರಂಪರೆ (೧೯೬೪) :**

ವೀರ ಶೈವಾಚಾರ್ಯರಲ್ಲೊಬ್ಬರಾದ ಮರುಳಸಿದ್ಧರ ಜೀವನ ಚರಿತ್ರೆಯಿದು. ಕೃತಿ ವಾರ್ಧಕ ಷಟ್ಪದಿಯಲ್ಲಿದೆ. ಆರು ಸಂಧಿಗಳಿವೆ. ಇದ್ದಕ್ಕೆ 'ಸಿದ್ಧಲಿಂಗ ಚಾರಿತ್ರ' ಎಂದು ಹೆಸರುಂಟು.

ಈ ಗ್ರಂಥವು ಬರೀ ಕಾವ್ಯವಲ್ಲ ; ಅನೇಕ ಐತಿಹಾಸಿಕಾಂಶಗಳನ್ನು ಒಳಗೊಂಡ ವೀರಶೈವ ಪುರಾಣ. ಕನ್ನಡ ನಾಡಿನಲ್ಲಿ ಜನಿಸಿ ನಾಡಿಗರಿಗೆ ತನ್ನ ನಡೆನುಡಿಗಳಿಂದ ಬೋಧಿಸಿದ ಮಹಾಪುರುಷನೊಬ್ಬನ ಜೀವನ ಚರಿತ್ರೆಯಿದು. ವೀರಶೈವ ಆಚಾರ್ಯರಲ್ಲೊಬ್ಬನು ಎಂದು ಹೇಳಲ್ಪಡುತ್ತಿರುವ ಈತನ ವಿಷಯದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆಗೆ ಈ ಗ್ರಂಥವು ಸಹಾಯ

ವಾಗಬಹುದು. ಮರುಳಸಿದ್ಧನು ರೇವಣನಿಂದ ಉಪದೇಶ ಹೊಂದಿದನೆಂಬ ಅಂಶವೂ ಗಮನಾರ್ಹವಾದುದು. ಈವರೆಗೆ ಈ ವಿಷಯ ಪ್ರಕಟವಾಗಿರಲಿಲ್ಲ. 'ರೇವಣ್ಣ ಪ್ರಭುವೆ' ಎಂಬ ಅಂಕಿತವುಳ್ಳ ಒಂದು ಮರುಳಸಿದ್ಧ ವಚನವೂ ದೊರೆಯುತ್ತದೆ. ಆದುದರಿಂದ ಮರುಳನು ರೇವಣನ ಶಿಷ್ಯನಾಗಿದ್ದನೆಂಬುದರಲ್ಲಿ ಸಂಶಯವಿಲ್ಲ.

ದೇವಕವಿಯು ಬಾಳ್ಗುಳಿಯ ಕಲಿದೇವನ ಕೃಪಾ ಬಲದಿಂದ, ಗದ್ದುಗೆಯ ರಾಮಿ ತಂದೆಯ 'ಗುರುಬೋಧೆ'ಯ ಮಹಾತ್ಮೆಯನ್ನು ಆಧರಿಸಿ ಇತಿಹಾಸ, ಸ್ಥಳಪುರಾಣ, ದಂತಕತೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು 'ಸಿದ್ಧಲಿಂಗ ಚಾರಿತ್ರ' ಎಂಬ ಈ ಕೃತಿಯನ್ನು ರಚಿಸಿದ್ದಾರೆ. ಜನಜೀವನವನ್ನು ಒಳಹೊಕ್ಕು ನೋಡುವ ಕಣ್ಣೂ, ಮನ ಉಳ್ಳವನೀತ. ಈತನ ಕೃತಿಯನ್ನು ಹಲವು ದೃಷ್ಟಿಗಳಿಂದ ವ್ಯಾಸಂಗಮಾಡುವವರಿಗೆ ಲಾಭವುಂಟು. ಲಿಂಗಾಂಗೀಧರ್ಮದ ನಿಜವಾದ ಇತಿಹಾಸವನ್ನು ತಿಳಿಯಬೇಕೆನ್ನುವವರಿಗೆ ಇದು ಅತ್ಯಮೂಲ್ಯಗ್ರಂಥ" ಎಂದು ಸಂಪಾದಕರು ಹೇಳಿಕೊಂಡಿದ್ದಾರೆ.

**ಜೇಡರ ದಾಸಿಮಯ್ಯನ ವಚನಗಳು (೧೯೭೪) :**

"ಜೇಡರದಾಸಿಮಯ್ಯನ ಕಥಾವಾಹಿನಿಯು ಪ್ರಾಚೀನ ಶಿಲಾ ಲೇಖನಗಳಲ್ಲಿ ಸುಳಿವುದೋರಿ ಬಸವಣ್ಣನವರ ವಚನಗಳಿಂದಲೂ ಅನೇಕ ಕನ್ನಡ ಸಂಸ್ಕೃತ ಕಾವ್ಯಗಳಿಂದಲೂ ಪುಷ್ಟಿಗೊಂಡು, ಹರಿದು, ಜನಮನೋಭೂಮಿಯನ್ನು ತಣಿಸಿ ಸತ್ಫಲಗಳನ್ನೀಯುತ್ತಿರುವುದು. ಈ ಮೂಲಗಳಲ್ಲಿ ಪ್ರಾಚೀನವೂ ವಿಶ್ವಾಸಾರ್ಹವೂ ಆದುದನ್ನು ಮಾತ್ರ ಆಧರಿಸಿ ಈತನ ಜೀವಚಾರಿತ್ರಗಳನ್ನು ರೂಪಿಸಲು ಇಲ್ಲಿ ಪ್ರಯತ್ನಿಸಿದೆ.

ಹನ್ನೆರಡನೆಯ ಶತಮಾನಕ್ಕೆ ಪೂರ್ವದಲ್ಲಿ ಕನ್ನಡ ನಾಡಿನ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳು ಎಂತಿದ್ದುವೆಂಬುದನ್ನು ನೆನೆಸಿಕೊಂಡರೆ ಜೇಡರದಾಸಿಮಯ್ಯನು ಬಹುಜನ ಸಮಾಜದ ಉದ್ಧಾರಕ್ಕಾಗಿಯೇ ಜನತೆಯಿಂದ ಮೂಡಿಬಂದ ಮಹಾನಾಯಕ, ಮಾನವ ಮಹಾದೇವ ಎಂಬ ಅಂಶ ಅರಿವಾಗಬಲ್ಲದು. ಶಿಷ್ಟರು, ಸುಸಂಸ್ಕೃತರು ಎನ್ನಿಸಿಕೊಂಡ ಮಹಾಜನರು (ಗಂಡಸರು ಮಾತ್ರ) ದೇವಮಂದಿರಗಳೂ ದೈವಭಕ್ತಿಯೂ ತಮ್ಮ ಗುತ್ತಿಗೆಯೆಂದು ಸಾರುತ್ತ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿದ್ದ ಕಾಲದವರು. ವರ್ಣಭೇದ ನೀತಿಯು ತಾಂಡವವಾಡುತ್ತಾ ಜನಸಾಮಾನ್ಯರನ್ನು ತೊತ್ತಳದುಳಿಯುತ್ತಿದ್ದಿತಾಗ, ಹೆಣ್ಣಿಗಂತೂ, ಅದು ಎಲ್ಲಿಯೇ ಹುಟ್ಟಿರಲಿ ಜನ ಕಲ್ಯಾಣ ಸಾಧನೆಗೆ ಅವಕಾಶವೇ

ಇರಲಿಲ್ಲ. ಒಟ್ಟಿನಲ್ಲಿ ಶ್ರೀಸಾಮಾನ್ಯನು ಹಲವು ಬಗೆಯ ಸಾಮಾಜಿಕ ಅನ್ಯಾಯಗಳಿಂದಾಗಿ, ಆಧ್ಯಾತ್ಮಿಕ ಹಸಿವಿನಿಂದ ಕಂಗಾಲಾಗಿ ಕಂಗಾಣದೆ ಪರಿತಪಿಸುತ್ತಿದ್ದ. ಆಗ ಜನತೆಯ ಆಶೋತ್ತಗಳನ್ನು ಈಡೇರಿಸಲೆಂದು ಜನತೆಯಿಂದಲೇ ಮೂಡಿಬರುತ್ತಾನೆ, ಜೇಡರದಾಸಿಮಯ್ಯ. ಎಲ್ಲರಿಗೂ ತಿಳಿಯುವಂತಹ ಸವಿಗನ್ನಡ ವಚನಗಳಲ್ಲಿ ನಡೆನುಡಿ ಸದ್ಭಕ್ತಿ ಸದಾಚಾರಗಳನ್ನು ಬೋಧಿಸುತ್ತಾನೆ, ನಡೆದು ತೋರಿಸುತ್ತಾನೆ, ನುಡಿದು ತೋರಿಸುತ್ತಾನೆ. ಆಗ ಕನ್ನಡ ಮಕ್ಕಳಲ್ಲಿ ಹೊಸ ಹುರುಪು, ಹೊಸ ಚೇತನ ಉಂಟಾಗಿ ಅವರು ತಮ್ಮತನವನ್ನು ಕಂಡುಕೊಳ್ಳುತ್ತಾರೆ. ಅವರ ಜೀವನ ಮಾರ್ಗ ಶಿವಮಯ ವಾಗುತ್ತದೆ.

ದಾಸಿಮಯ್ಯ ಬಸವಪೂರ್ವ ಶರಣರಲ್ಲೆಲ್ಲ ಹಿರಿಯನಲ್ಲದಿದ್ದರೂ, ಅವರಲ್ಲೆಲ್ಲ ಅತ್ಯಂತ ಹಿರಿಮೆಯುಳ್ಳವನು. ಮಹಾಜ್ಞಾನಿ ಮತ್ತು ಪವಾಡ ಪುರುಷ. ಆ ಕಾಲದಲ್ಲಿ ಈತನಿಗಿದ್ದ ಶಿಷ್ಯಸಂಪತ್ತು ಮತ್ತಾವ ಶಿವಶರಣನಿಗೂ ಇರಲಿಲ್ಲ. ಈತನಿಂದ ಈತನ ಕುಲವೇ 'ದೇಸೆವಡೆಯಿತ್ತು.' ಶಾಸನವೊಂದರಲ್ಲಿ ಹೇಳಿರುವಂತೆ ಈತನು ಜಾಡಕುಲತಿಲಕ ಎಂದು ಪ್ರಸಿದ್ಧಿ ಪಡೆದದ್ದು, ಅತ್ಯಂತ ಪೂಜ್ಯ ವ್ಯಕ್ತಿಯಾಗಿದ್ದವನು" ಎಂದಿದ್ದಾರೆ ಕೃತಿಯ ಸಂಪಾದಕರು. ಇವನ ಸಾಕಷ್ಟು ವಚನಗಳ ವಿಶ್ಲೇಷಣೆ ಈ ಕೃತಿಯಲ್ಲಿದೆ.

**ಸಮಾರೋಪ :**

ದೇವೀರಪ್ಪನವರು ಕನ್ನಡ ಸಾಹಿತ್ಯಕ್ಕೆ, ಸಂಶೋಧನಾ ಕ್ಷೇತ್ರಕ್ಕೆ, ಶರಣ ಸಾಹಿತ್ಯಕ್ಕೆ ತಮ್ಮ ಇಡೀ ಬದುಕನ್ನು ಉಸಿರಿರುವತನಕವೂ ಸವೆಸಿ ಬರವಣಿಗೆಯ ಮೂಲಕ ದುಡಿದಿದ್ದಾರೆ. ಯಾವುದೇ ಪ್ರಶಸ್ತಿ, ಪದವಿಗಳಿಗೆ ಎಂದೂ ಹಾತೊರೆಯದೆ ಶ್ರದ್ಧೆ, ಪರಿಶ್ರಮಗಳಿಂದ ಶ್ರಮಿಸಿದ್ದಾರೆ. ಯಾವ ಡಾಕ್ಟರೇಟ್ ಪದವಿಗೂ ಕಡಿಮೆಯಿಲ್ಲದಂತೆ ಇವರು ನಿರಂತರವಾಗಿ ಕೃಷಿಗೈದಿದ್ದಾರೆ. ಬಾಲ್ಯದಲ್ಲಿ ಬೇಸಾಯ ಹೊಡೆಯಬೇಕಾದ ಹುಡುಗ ಮೂಳೆ ಮುರಿತದ ಕಾರಣ ಅಕ್ಷರ ಜ್ಞಾನ ಸಂಪಾದಿಸಲು ಮುಂದಾದರು. ಕಷ್ಟಗಳ ಸುರಿಮಳೆಯೇ ಬೆನ್ನ ಹಿಂದಿದ್ದರೂ ಬಡತನದ ಬೇಗೆಯಲ್ಲಿ ಬೇಯುತ್ತಿದ್ದರೂ ಕಷ್ಟಪಟ್ಟು ಓದಿ ವಿದ್ಯಾವಂತರಾದರು. ಶ್ರೇಷ್ಠ ವಿದ್ವಾಂಸರ ಸಮ್ಮುಖದಲ್ಲಿ ಪ್ರತಿಭೆ, ಪಾಂಡಿತ್ಯ, ವಿದ್ವತ್ತುಗಳನ್ನು ಗಳಿಸಿವರು. ಪದವೀಧರ ತಜ್ಞರಾಗಿ, ಸಹಾಯಕ ನಿರ್ದೇಶಕರಾಗಿ, ನಿರ್ದೇಶಕರಾಗಿ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸಿ ಹಸ್ತಪ್ರತಿ, ಓಲೆಗರಿ ಸಂಗ್ರಹಿಸಿ ಪ್ರಾಚೀನ ಕೃತಿಗಳನ್ನು ಸಂಗ್ರಹಿಸಿ, ಸಂಪಾದಿಸಿ,



ರಾಜ್ಯಪಾಲರಾಗಿದ್ದ ಮೋಹನ್‌ಲಾಲ್ ಸುಖಾಡಿಯ ಅವರಿಂದ ಸನ್ಮಾನ

ಅಧ್ಯಯನ ಮಾಡಿ ಸಾಕಷ್ಟು ಕೃತಿಗಳನ್ನು ಪ್ರಕಟಿಸಲು ಕಾರಣರಾದರು. ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರಗಳೆರಡನ್ನೂ ಸಮೃದ್ಧಗೊಳಿಸಿ ಅತ್ಯಮೂಲ್ಯ ಕೃತಿಗಳನ್ನು ಕಾಣಿಕೆಯಾಗಿ ನೀಡಿದರು. ಇಂತಹ ಮಹನೀಯರಿಗೆ ದೊರೆತ ಪ್ರಶಸ್ತಿಗಳು ತುಂಬಾ ಕಡಿಮೆ. ಸಿರಿಗೆರೆಯ ತರಳಬಾಳು ಜಗದ್ಗುರುಗಳಿಂದ ೨.೨.೧೯೬೯ರಲ್ಲಿ 'ಸಾಹಿತ್ಯ ಶ್ರೀ' ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯು ೨೦.೩.೮೧ರಲ್ಲಿ ಲಕ್ಷ್ಮಿಯ ಗಂಧದ ವಿಗ್ರಹ ಹಾಗೂ ೫೦೦೦ ರೂ.ಗಳನ್ನು ನೀಡಿ ಸನ್ಮಾನಿಸಿದೆ. ಹಾಗೂ ೧೯೭೫ನೇ ಸಾಲಿನಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಸಾಹಿತ್ಯ ಪ್ರಶಸ್ತಿಯನ್ನು ೩೦೦೦ರೂ.ನೊಂದಿಗೆ ಮೆಡಲ್ ನೀಡಿ ಗೌರವಿಸಿದೆ. ಲಾಲ್‌ಬಾಗ್‌ನಲ್ಲಿ ನಡೆದ ಶರಣ ಸಾಹಿತ್ಯ ಸಮ್ಮೇಳನದಲ್ಲಿಯೂ ಇವರನ್ನು ಸನ್ಮಾನಿಸಲಾಗಿದೆ. ಆದರೆ ಯಾವುದೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯಾಗಲಿ ಇವರಿಗೆ ಲಭಿಸಲಿಲ್ಲ. ಸಾಹಿತ್ಯ ಸೇವೆಯನ್ನು ನಿರಂತರವಾಗಿ ಮಾಡಿಕೊಂಡು ಬಂದ ಇವರು ಪಾಲಿಗೆ ಬಂದದ್ದು ಪಂಚಾಮೃತ ಎಂಬ ಹಾಗೆ ಬದುಕುತ್ತಾ, ಹರಿಹರ ಬದುಕಿದ ಶರಣರ ಬದುಕನ್ನು ಬದುಕುತ್ತಾ, ಮಹಾನ್ ವ್ಯಕ್ತಿಗಳ ಅಗ್ರಪಂಕ್ತಿಯಲ್ಲಿ ಉಳಿದವರಾಗಿದ್ದಾರೆ. ಇಂತಹರ ಬಗೆಗೆ ನನಗೆ ಬರೆಯುವ ಸದವಕಾಶ ದೊರೆತದ್ದು ನಿಜಕ್ಕೂ ಸಂತೋಷದ ಸಂಗತಿ. ನನ್ನ ಬಗ್ಗೆ ದೇವೀರಪ್ಪನವರು ತೋರಿದ ಒಲವು, ಆಗಾಗ ಅವರಿದ್ದ ಮನೆಗೆ ಹೋಗಿ ಬರುತ್ತಿದ್ದಾಗ

ಹೇಳುತ್ತಿದ್ದ ಮಾತುಗಳು, ಮಾಡಬೇಕಾದ ಕೆಲಸ ಕಾರ್ಯಗಳನ್ನು ನೆನೆಸಿಕೊಂಡಾಗ ನನ್ನ ಮೈ ರೋಮಾಂಚನಗೊಳ್ಳುತ್ತದೆ. ಈ ಒಂದು ಸಣ್ಣ ಕಾರ್ಯದ ಮೂಲಕ ಅವರನ್ನು ಸದಾ ಸ್ಮರಿಸಿಕೊಳ್ಳುತ್ತ ಹೃತ್ಪೂರ್ವಕ ನಮನಗಳನ್ನು ಅವರಿಗೆ ಸಲ್ಲಿಸುತ್ತೇನೆ.

❖❖❖

# ಕುಟುಂಬದವರ ನುಡಿಗಳು

## ೧. ನೆನಪುಗಳು

- ಶ್ರೀಮತಿ ಗೀತಾ

ಸಾಮಾನ್ಯವಾಗಿ ತಂದೆತಾಯಿಗಳು ತಮ್ಮ ಮಕ್ಕಳ ಸ್ವಭಾವ, ವ್ಯಕ್ತಿತ್ವ, ಜೀವನ ವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ನಮ್ಮ ತಂದೆ ಶ್ರೀ ಎಚ್. ದೇವೀರಪ್ಪ ಹಾಗೂ ನಮ್ಮ ತಾಯಿ ಬಿ. ರುದ್ರಮ್ಮ ನಮ್ಮ ವ್ಯಕ್ತಿತ್ವ ಹಾಗೂ ಜೀವನ ರೂಪಿಸುವುದರಲ್ಲಿ ದೊಡ್ಡ ಪಾತ್ರ ವಹಿಸಿದರು.

ನಮ್ಮ ತಂದೆ ತಾಯಿಯವರಿಗೆ ನಾವು ನಾಲ್ವರು ಮಕ್ಕಳು. ನಾನು ಗೀತಾ ನನ್ನ ತಂಗಿಯರಾದ ಶಾಂತಾ, ಗೌರು, ಅವರ ಏಕಮಾತ್ರ ಪುತ್ರ ಶ್ರೀ ನಾಗೇಶ್ ನಾಲ್ಕನೆಯವನು. ನಾಲ್ವರೂ ವಿದ್ಯಾವಂತರು. ನಾನು ಎಂ.ಎ. ಬಿ.ಇಡಿ. ಶಾಂತಾ ಹಿಂದಿ ಎಂ.ಎ., ಗೌರು ಬಿ.ಎಸ್ಸಿ, ಬಿ.ಇಡಿ. ಓದಿದ್ದೇವೆ. ನನ್ನ ತಮ್ಮ ಬಿ.ಇ. ಎಲೆಕ್ಟ್ರಿಕಲ್ ಇಂಜಿನಿಯರ್. ದೊಡ್ಡ ಅಳಿಯಂದಿರಾದ ಡಾ. ಟಿ. ಬಸಪ್ಪನವರು M.Sc. Degree ಮಾಡಿ ಹೆಸರಘಟ್ಟದ Red Dane Project ನಲ್ಲಿ ಉಪನಿರ್ದೇಶಕರಾಗಿ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ಎರಡನೆ ಅಳಿಯಂದಿರಾದ ಡಾ. ನಾಗಭೂಷಣ ಎಂ.ಎ., ಎಲ್.ಎಲ್.ಬಿ., ಪಿಎಚ್.ಡಿ. ಮಾಡಿ ಬೆಂಗಳೂರು ಕೃಷಿವಿಶ್ವವಿದ್ಯಾನಿಲಯದ ಮಹಾಲೇಖ ಪರೀಕ್ಷಕರಾಗಿ ಸೇವೆಸಲ್ಲಿಸಿ ನಿವೃತ್ತರಾಗಿದ್ದಾರೆ. ಸೊಸೆ ನಿರುಪಮಾ ಕನ್ನಡ ಎಂ.ಎ. ಪದವೀಧರೆಯಾಗಿದ್ದಾರೆ. ನಮ್ಮ ತಂದೆತಾಯಿಯರ ಮೊಮ್ಮಕ್ಕಳು ಐದುಜನ.

ನಮ್ಮ ತಂದೆಯವರ ತಮ್ಮ ಅಂದರೆ ನಮ್ಮ ಚಿಕ್ಕಪ್ಪ ಜಿ. ಬಸವರಾಜು ಬಿ.ಎ., ಅವರು ಕಮರ್ಷಿಯಲ್ ಟ್ಯಾಕ್ಸ್ ಅಫೀಸರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿ ಶಿವಮೊಗ್ಗದಲ್ಲಿ ನೆಲೆಸಿದ್ದಾರೆ. ಅವರ ಪತ್ನಿ ಶ್ರೀಮತಿ ಯಶೋದಮ್ಮನವರು ಪ್ರಗತಿಪರ ರೈತ ಮಹಿಳೆ ಎಂಬ ಕೀರ್ತಿ ಪಡೆದಿದ್ದಾರೆ. ಅವರ ಮಕ್ಕಳಾದ ವೀಣಾ, ಚಂದ್ರು, ರವಿ, ಪೂರ್ಣಿಮಾ ಎಲ್ಲರೂ ಪದವೀಧರರಾಗಿದ್ದಾರೆ.

ಈಗಲೂ ಬೆಂಗಳೂರಿನ ವಿಜಯನಗರದ ನಮ್ಮ ತಂದೆ ಮನೆಯನ್ನು ಪ್ರವೇಶಿಸುವಾಗ ತಂದೆಯ ನೆನಪು ಉಕ್ಕಿ ಬರುತ್ತದೆ. ನೀಳಕಾಯದ ಆಜಾನುಬಾಹು ವ್ಯಕ್ತಿಯಾಗಿದ್ದ ನಮ್ಮ ತಂದೆ ತಮ್ಮ ಅಧ್ಯಯನದ ಕೋಣೆಯಲ್ಲಿ ಸದಾ ಕುಳಿತು ಏನನ್ನೋ ಓದುತ್ತ ಬರೆಯುತ್ತ ಅವರಲ್ಲೇ ತಲ್ಲೀನರಾಗಿರುತ್ತಿದ್ದರು. ಅವರಿಲ್ಲದ ಕೊರತೆ ನಮ್ಮನ್ನು ಕಾಡುತ್ತದೆ.

ಶ್ರೀ ಚೆನ್ನಪ್ಪ ಎರೆಸೀಮೆಯವರು ಹಾಗೂ ಪ್ರೊ. ರಾಚಪ್ಪನವರು ಒಟ್ಟಿಗೆ ಕುಳಿತು ಸಂಶೋಧನೆ, ಗ್ರಂಥ ಸಂಪಾದನೆಯ ವಿಷಯ ಚರ್ಚಿಸುತ್ತಿದ್ದರು. ಆಗಾಗ್ಗೆ ಕಾಫಿ ಸೇವನೆಯೂ ಆಗುತ್ತಿತ್ತು. ಎಷ್ಟೋವೇಳೆ ನಮ್ಮ ತಾಯಿಯವರೂ ಸಹಾಯ ಮಾಡುತ್ತಿದ್ದರು. ನಮ್ಮ ತಾಯಿ ಆಗಿನಕಾಲದ ಬಿ.ಎ. ಓದಿದ್ದರೂ ಯಾವ ನೌಕರಿಗೂ ಹೋಗದೆ ಸದ್ಗೃಹಿಣಿಯಾಗಿಯೇ ಉಳಿದರು. ಬೆಳಗ್ಗೆ ಬೇಗ ಎದ್ದು ಪೂಜೆ ಪುನಸ್ಕಾರ ಗೃಹಕಾರ್ಯಗಳಲ್ಲಿ ತೊಡಗಿರುತ್ತಿದ್ದರು. ಮಕ್ಕಳು ಮೊಮ್ಮಕ್ಕಳಿಗೆ ಒಳ್ಳೆ ಮಾರ್ಗ ದರ್ಶನ ನೀಡುತ್ತಿದ್ದರು.

ಚಿಕ್ಕಂದಿನಲ್ಲಿ ನನಗೆ ನೆನಪಿರುವಂತೆ ನಮ್ಮ ತಂದೆ ನಮಗೆಲ್ಲ ಒಳ್ಳೊಳ್ಳೆಯ ಚಾರಿತ್ರ್ಯನಿರ್ಮಾಣ ಮಾಡುವಂತಹ ಕಥೆಗಳನ್ನು ಹೇಳುತ್ತಿದ್ದುದುಂಟು. ಜೀವನದ ಮೌಲ್ಯಗಳನ್ನು ತಿಳಿಸುವುದರಲ್ಲಿ ಹಿಂದೆ ಬೀಳಲಿಲ್ಲ. ರಾಮಾಯಣ, ಮಹಾಭಾರತ, ಪಂಚತಂತ್ರ ಕಥಾಸರಿತ್ಸಾಗರ ಮುಂತಾದ ಪುಸ್ತಕಗಳನ್ನು ಓದಲು ಪ್ರೋತ್ಸಾಹಿಸು ತ್ತಿದ್ದರು. ಎಷ್ಟೋ ಬಾರಿ ಕಣ್ಣಿಗೆ ಕಟ್ಟುವಂತೆ ಮನಸ್ಸಿಗೆ ಮುಟ್ಟುವಂತೆ ಕಥೆಗಳನ್ನು ಹೇಳುತ್ತಿದ್ದರು. ಯಾವುದು ಸರಿ ಯಾವುದು ತಪ್ಪು ಎಂಬ ಯುಕ್ತಾ ಯುಕ್ತ ವಿವೇಚನೆ ಮೂಡಿಸುವುದರಲ್ಲಿ ಸಫಲರಾದರು. ಅವರು ಒಮ್ಮೆ ಹೇಳಿದ ಹರಿಶ್ಚಂದ್ರನ ಕಥೆಯ ಸ್ಮಶಾನದ ವರ್ಣನೆ ಬಹಳ ಪರಿಣಾಮಕಾರಿಯಾಗಿತ್ತು.

ನಮ್ಮ ತಂದೆ ತುಂಬ ಸರಳಜೀವಿ, ಸಮಾಧಾನದ ಶಾಂತ ಸ್ವಭಾವದವರು, ಅವರಿಗೆ ಕೋಪ ಬರುತ್ತಿದ್ದುದೇ ಅಪರೂಪ. ಆದರೆ ಅನ್ಯಾಯವನ್ನು ಸದಾ ಪ್ರತಿಭಟಿಸುತ್ತಿದ್ದರು. ಸತ್ಯಕ್ಕೆ ನ್ಯಾಯಕ್ಕೆ ಸದಾ ಬೆಲೆಕೊಡುತ್ತಿದ್ದರು. ಪತ್ರಿಕೆಗಳಲ್ಲಿ ಓದುಗರ ಅಂಕಣದಲ್ಲಿ ವಿಚಾರಾತ್ಮಕ ಪತ್ರಗಳನ್ನು ಬರೆದದ್ದುಂಟು.

ಹಳ್ಳಿಯಲ್ಲಿ ಹುಟ್ಟಿಬೆಳೆದು ಕಷ್ಟಪಟ್ಟು ವಿದ್ಯಾಭ್ಯಾಸ ಮಾಡಿದ್ದ ಅವರಿಗೆ ವಿದ್ಯೆಯ ಬೆಲೆ ಚೆನ್ನಾಗಿ ಗೊತ್ತಿತ್ತು. ಆದ್ದರಿಂದಲೇ ನಮಗೆಲ್ಲಾ ಒಳ್ಳೆಯ ವಿದ್ಯೆ ಕೊಡಿಸಿದರು. ಹಳ್ಳಿಯಿಂದ ದಿಲ್ಲಿಗೆ ಎನ್ನುವಂತೆ ಮಲ್ಲಿಗೇನಹಳ್ಳಿಯಿಂದ ಮೈಸೂರು ಬೀರೂರು

ಕೊನೆಗೆ ಬೆಂಗಳೂರು ಅವರ ಸ್ಥಳವಾಯಿತು. ಹಂತಹಂತವಾಗಿ ಮೇಲೇರಿ ಕೊನೆಗೆ ಬೆಂಗಳೂರಿನಲ್ಲಿ ಮನೆಕಟ್ಟಿ ಅಲ್ಲೇ ನೆಲೆಸಿದರು. ಮೈಸೂರಿನಲ್ಲಿ ಕೃಷ್ಣಮೂರ್ತಿಪುರ, ಲಕ್ಷ್ಮೀಪುರ, ಯಾದವಗಿರಿಯಲ್ಲಿ ಇದ್ದು ಕೊನೆಯದಾಗಿ ಬೆಂಗಳೂರಿನ 'ಹರಿಹರ' ಅವರ ಮನೆಯಾಯಿತು.

ನಾವು ಓದುತ್ತಿರುವಾಗ ಅವರು ನಮ್ಮ ಪಠ್ಯೇತರ ಚಟುವಟಿಕೆಗಳಿಗೂ ಗಮನಕೊಡುತ್ತಿದ್ದರು. ಏಳನೆಯ ತರಗತಿಯಲ್ಲಿ ನಾನು ಓದುತ್ತಿರುವಾಗ ಚರ್ಚಾಸ್ಪರ್ಧೆಯಲ್ಲಿ ಭಾಗವಹಿಸಲು ಅವರು ನನಗೆ ತಯಾರಿಕೊಟ್ಟು, ಗ್ರಾಮಜೀವನ ನಗರಜೀವನಗಳಲ್ಲಿ ಯಾವುದು ಉತ್ತಮ ಎಂದು ಚರ್ಚೆಯಲ್ಲಿ ಗ್ರಾಮಜೀವನವೇ ಉತ್ತಮ ಎಂದು ವಾದಿಸಲು ಸಹಾಯಮಾಡಿ ನಾನವರಲ್ಲಿ ಗೆದ್ದದ್ದೂ ಉಂಟು. ಎಷ್ಟೋ ವೇಳೆ ನಮಗೆ ತಿಳುವಳಿಕೆ ನೀಡುವಂಥ ಹೊಸ ಹೊಸ ವಿಷಯ ತಿಳಿಸುತ್ತಿದ್ದರು. ರಸಪ್ರಶ್ನೆಗಳ ಮೂಲಕ ನಮ್ಮ ಜ್ಞಾನ ವೃದ್ಧಿಮಾಡುತ್ತಿದ್ದರು.

ಸಾಹಿತ್ಯದ ಬಗ್ಗೆ ನಮ್ಮಲ್ಲಿ ಆಸಕ್ತಿಮೂಡಿಸಿದವರು ನಮ್ಮ ತಂದೆಯವರೇ. ಎಲ್ಲ ಭಾಷೆಯ ಒಳ್ಳೆಯ ಕೃತಿಗಳ ಬಗ್ಗೆ ನಮಗೆ ತಿಳಿಸಿ ಕುವೆಂಪು, ವಿ.ಸೀ., ಮಾಸ್ತಿ, ದ.ರಾ. ಬೇಂದ್ರೆ, ಎ.ಆರ್.ಕೃಷ್ಣಶಾಸ್ತ್ರಿ ಇವರ ಬಗ್ಗೆ ನಾವು ತಿಳಿದದ್ದೇ ಅವರಿಂದ. ಇಂಗ್ಲಿಷಿನ ಅನೇಕ ಕೃತಿಗಳ ಬಗ್ಗೆ ಹೇಳಿ ಥಾಮಸ್‌ಹಾರ್ಡಿ, ಲಿಯೋ ಟಾಲ್‌ಸ್ಟಾಯ್, ಅಸ್ಟಿನ್, ಬ್ರಾಂಟಿ ಇವರೆಲ್ಲರ ಕಾದಂಬರಿ ಕೃತಿಗಳನ್ನು ಓದುವಂತೆ ಮಾಡಿದರು. ಇಷ್ಟಲ್ಲದೆ ಇಂಗ್ಲಿಷ್ ಕನ್ನಡ ಹಿಂದಿ ಉತ್ತಮ ಚಲನಚಿತ್ರಗಳನ್ನು ವೀಕ್ಷಿಸುವ ಅವಕಾಶ ನಮಗಿತ್ತು. ನಮ್ಮ ಅಭಿರುಚಿಗಳನ್ನು ಬೆಳೆಸುವುದರಲ್ಲಿ ನಮ್ಮ ತಂದೆತಾಯಿಯರ ಪಾತ್ರ ಸಾಕಷ್ಟಿದೆ. ಹಾಗೆ ನೋಡಿದರೆ ದೈವಭಕ್ತಿ, ಶಿಸ್ತಿನ ಜೀವನ ಕಲಿಸಿದ್ದು ನಮ್ಮ ತಾಯಿಯವರಾದರೆ, ಸಾಹಿತ್ಯಾಸಕ್ತಿ ಉತ್ತಮಮಟ್ಟದ ಅಭಿರುಚಿ ಮೂಡಿಸಿದ್ದು ನಮ್ಮ ತಂದೆಯವರು. ಇಂಗ್ಲಿಷಿನ ಕೆಲವು ಕೃತಿಗಳನ್ನು ನಮ್ಮ ಭಾರತೀಯ ಜೀವನಕ್ಕೆ ಹೊಂದಿಸಿ ಅನುವಾದ ಮಾಡಲು ಅನೇಕ ಸಲ ಹೇಳಿದರು.

ತಾಳೆಗರಿಯ ಗ್ರಂಥಗಳನ್ನು ಹುಡುಕಿಕೊಂಡು ಹೋಗಿ ಅನೇಕ ಊರುಗಳಲ್ಲಿ ತಿರುಗಾಡಬೇಕಿತ್ತು. ಅನೇಕ ಐತಿಹಾಸಿಕ, ಪ್ರೇಕ್ಷಣೀಯ ಸ್ಥಳಗಳನ್ನು ಅದೇ ಸಮಯದಲ್ಲಿ ನೋಡಿಬರುತ್ತಿದ್ದರು. ಉತ್ತರ ಭಾರತ ಪ್ರವಾಸವನ್ನೂ ಮಾಡಿದ್ದರು. ಉಡುತಡಿ, ಬಳ್ಳಿಗಾವೆ, ಬನವಾಸಿ ಮುಂತಾದ ಊರುಗಳಿಗೆ ಭೇಟಿ ನೀಡಿದ್ದರು. ತಾಳೆಗರಿ ಗ್ರಂಥಗಳನ್ನು ಓದಿ ಪ್ರತಿಮಾಡುವುದು, ಒಂದೇ ಗ್ರಂಥದ ವಿವಿಧ ಪ್ರಕಟಣೆಗಳ

ಕುಲನಾತ್ಮಕ ಅಧ್ಯಯನವನ್ನು ಮಾಡುತ್ತಿದ್ದರು. ಉದಾಹರಣೆಗೆ ರಗಳೆಗಳ ಅನೇಕ ಪ್ರತಿಗಳನ್ನು ಹೊಲಿಸಬೇಕಿತ್ತು. ಈ ಕೆಲಸದಲ್ಲಿ ನಾನೂ ಒಮ್ಮೊಮ್ಮೆ ಸಹಾಯಮಾಡುತ್ತಿದ್ದೆ. ನನ್ನ ವಿದ್ಯಾಭ್ಯಾಸ ಮುಗಿದ ಮೇಲೆ ಬಿಡುವಿನ ವೇಳೆಯಲ್ಲಿ ನಾನೂ ಅವರೊಂದಿಗೆ ತಾಳೆಗರಿ ಪ್ರತಿಮಾಡುವಾಗ ಆ ಗ್ರಂಥಗಳ ಬಗೆಗೆ ಸ್ವಲ್ಪ ತಿಳಿದುಕೊಂಡೆ. ಹರಿಹರನ ರಗಳೆಗಳನ್ನು ಅವರು ಬಹಳ ಮೆಚ್ಚಿದ್ದರು. ಮನೆಗೆ "ಹರಿಹರ" ಎಂದೇ ಹೆಸರಿಸಿದ್ದರು. ಒಂದು ರಗಳೆಯಲ್ಲಿ ಬರುವ ಶಿವಭಕ್ತ ಶಿವನಿಗೆ ಅರ್ಪಿಸುವ ಅಂಬಲಿಯ ವರ್ಣನೆಯನ್ನು ಮನಸಾರೆ ಮೆಚ್ಚಿದ್ದರು. ಅದರ ರುಚಿಯನ್ನು ಸದಾ ಹೊಗಳಿ ನಮಗೂ ಬಾಯಿಯಲ್ಲಿ ನೀರು ಬರುವಂತೆ ಮಾಡುತ್ತಿದ್ದರು.

ನಾವು ವಿವಿಧ ಊರುಗಳಲ್ಲಿ ನೌಕರಿನಿಮಿತ್ತ ಹೋದಾಗ ನಮ್ಮ ತಂದೆ ಎಲ್ಲ ಸ್ಥಳಗಳಿಗೂ ಬಂದು ನಮ್ಮ ಜತೆ ಸಂತೋಷವಾಗಿ ಕಾಲಕಳೆಯುತ್ತಿದ್ದರು. ಹರಪನಹಳ್ಳಿ, ಹೊನ್ನಾಳಿ, ಶಿಕಾರಿಪುರ, ದಾವಣಗೆರೆಗಳಲ್ಲಿ ಬಂದಿದ್ದು ಆರಾಮವಾಗಿದ್ದು ಮೊಮ್ಮಕ್ಕಳ ಜತೆ ಇದ್ದು ಬೆಂಗಳೂರಿಗೆ ವಾಪಸಾಗುತ್ತಿದ್ದರು. ದಾವಣಗೆರೆಗೆ ಬಂದಾಗ ಒಳ್ಳೆಯ ಸಭೆ ಸಮಾರಂಭಗಳನ್ನು ಹುಡುಕಿಕೊಂಡು ಹೋಗಿ ಭಾಗವಹಿಸುತ್ತಿದ್ದರು. ದಾವಣಗೆರೆಯ ಜನರನ್ನು, ಅಲ್ಲಿಯ ಅಡುಗೆಯನ್ನೂ ತುಂಬಾ ಇಷ್ಟಪಡುತ್ತಿದ್ದರು. ೧೯೮೭ರ ಡಿಸೆಂಬರ್ ಕೊನೆಯವಾರ ದಾವಣಗೆರೆಗೆ ಬಂದರು. ನಮ್ಮ ಅಮ್ಮನೊಂದಿಗೆ ಆಗ ನಾನೂ ಹಾಗೂ ನನ್ನ ತಮ್ಮ ನಾಗೇಶ್ ದಾವಣಗೆರೆಯಲ್ಲೇ ಇದ್ದೆವು. ಅವರಿಗೆ ಮುನ್ಸೂಚನೆ ಏನಾದರೂ ಇತ್ತೇನೋ ತಿಳಿಯದು. ನಮ್ಮೊಂದಿಗೆ ಇರಬೇಕೇಂದೇ ಬಂದರು. ಆದರೆ ಉಬ್ಬಸದ ಕಾರಣದಿಂದ ೧೯೮೮ರ ಜನವರಿ ಮೂರನೆಯ ತಾರೀಖು ವಿಧಿ ಅವರನ್ನು ಸೆಳೆದೊಯ್ಯಿತು.

ನಮ್ಮ ತಂದೆ-ತಾಯಿಯವರ ಋಣವನ್ನು ನಾವೆಂದೂ ತೀರಿಸಲಾರೆವು.

# ೨ ಶರಣ ನಡೆದ ಶಿವಪಥ

- ಎಚ್.ಡಿ. ಶಾಂತಾ

ನನ್ನ ತಂದೆಯವರಾದ ಶ್ರೀ ಎಚ್. ದೇವೀರಪ್ಪನವರು ಕನ್ನಡದ ಪ್ರಸಿದ್ಧ ಸಾಹಿತಿಗಳು, ಸಾಹಿತ್ಯ ಸಂಶೋಧಕರೂ, ಗ್ರಂಥ ಸಂಪಾದನ ಕರ್ತೃಗಳೂ ಆಗಿದ್ದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅವರ ಕೊಡುಗೆ ಅಪಾರ. ಅವರ ಮಗಳಾದ ನಾನು ತಂದೆಯವರ ವ್ಯಕ್ತಿತ್ವದ ಬಗ್ಗೆ ಹೇಳಬೇಕಾದುದು ವೈಯಕ್ತಿಕ ದೃಷ್ಟಿಕೋನವಾದರೂ ಸಹ. ಅವರ ಮಿತ್ರರು, ಸಂಶೋಧಕರು, ಸಹೋದ್ಯೋಗಿಗಳು ಕಟ್ಟಿಕೊಡುವ ವ್ಯಕ್ತಿತ್ವದ ಒಂದು ಭಾಗವಾದರೂ ಆಗಬಹುದು.

ನನ್ನ ತಂದೆ ಶಿವಮೊಗ್ಗ ಜಿಲ್ಲೆಯ ಮಲ್ಲಿಗೇನಹಳ್ಳಿಯಲ್ಲಿ ಒಂದು ಸಾಧಾರಣ ಕೃಷಿಕ ಕುಟುಂಬದಲ್ಲಿ ಹುಟ್ಟಿದವರು. ಈ ಪುಟ್ಟಗ್ರಾಮದಲ್ಲಿ ವ್ಯವಸಾಯವನ್ನೇ ಪೂರ್ಣ ಆಧಾರವಾಗಿ ಮಾಡಿಕೊಂಡಿದ್ದ ಕುಟುಂಬ. ಆ ದಿನಗಳಲ್ಲಿ ಇದ್ದಂತೆ ಮಲ್ಲಿಗೇನಹಳ್ಳಿಯಲ್ಲೂ ಸಹ ವಿದ್ಯಾವಂತರು ಬಹಳ ಕಡಿಮೆ. ಬೆಳಗುತ್ತಿ ಶಿವಮೊಗ್ಗಗಳಲ್ಲಿ ಓದಿದರೂ ಸಹ ಬಾಲ್ಯದಲ್ಲಿ ಹೊಲಗದ್ದೆಗಳಲ್ಲಿ ಕೆಲಸ ಮಾಡಿದವ ರಾದುದರಿಂದ ಕೃಷಿ ಚಟುವಟಿಕೆಗಳ ಸಂಪೂರ್ಣ ಪರಿಚಯ ಅವರಿಗೆ ಇತ್ತು. ಪರಿಚಯ ಎನ್ನುವುದಕ್ಕಿಂತ ವ್ಯವಸಾಯದ ಕೆಲಸಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಿದ್ದರು. ಅದು ಅವರಿಗೆ ಬಲವಂತದ ಮಾಘಸ್ನಾನವಾಗಿರಲಿಲ್ಲ; ಭೂತಾಯಿಯ ಸೇವೆ ಅವರಿಗೆ ಪ್ರಿಯವಾದ ಕೈಂಕರ್ಯವಾಗಿತ್ತು. ತಮ್ಮಂದಿರಿಗೆ ಕೃಷಿ ಕಾರ್ಯಗಳನ್ನು ಹೇಳಿ ಕೊಡುವಷ್ಟು, ಅವರು ಅದರಲ್ಲಿ ನುರಿತಿದ್ದರು. ಕೃಷಿ ಉಪಕರಣಗಳ ಹೆಸರುಗಳು, ಅವುಗಳನ್ನು ಉಪಯೋಗಿಸುವ ರೀತಿ, ಬಯಲು ಸೀಮೆಯೊಂದಿಗೆ ಮಳೆಗಳ ಸರಸಾಟ, ಮಳೆಗೆ ಹೊಂದಿಕೊಂಡ ಮಣ್ಣಿನ ಸ್ವಭಾವ, ಆಯಾ ಋತುಮಾನಗಳಿಗೆ ತಕ್ಕಂತೆ ಬೆಳೆಯಬೇಕಾದ ಬೆಳೆಗಳು, ಅವುಗಳಿಂದ ಆಗುವ ಲಾಭ-ನಷ್ಟಗಳ ಅಂದಾಜು, ನಷ್ಟವೇ ಆದಲ್ಲಿ ಅದನ್ನು ಭರಿಸುವ ಬಗೆ ಹೀಗೆ ಇವುಗಳ ಪೂರ್ಣಾನುಭವ 'ಬೆಳುವಲದ ಮಡಿಲಲ್ಲಿ' ಕಾದಂಬರಿಯಲ್ಲಿ ಪದರುಪದರಾಗಿ, ಮಣ್ಣಿನೊಂದಿಗೆ ರೈತನೊಬ್ಬನ ಅವಿನಾಸಂಬಂಧ ಸೊಗಸಾಗಿ ಮೂಡಿ ಬಂದಿದೆ. ಕೃಷಿಕನ ಅನುಭವ, ಎಳೆಎಳೆಯಾಗಿ

ಸವಿಸ್ತಾರವಾದ ಸಂಸ್ಕೃತಿಯ ಸೊಗಡನ್ನು ಸೂಸುತ್ತದೆ. ರೈತನ ಪ್ರಾಣವಾದ ಎತ್ತುಗಳು, ಅಣ್ಣ ತಮ್ಮಂದಿರಿಗೂ ಅಧಿಕವೆಂಬ ಮನಮಿಡಿಯುವ ಬಾಂಧವ್ಯದ ಬೆಸುಗೆ 'ಕಾಣೆಮಾದ'ನ ಪಾತ್ರದ ಮೂಲಕ ಸಾಕಾರಗೊಂಡಿದೆ. ಹಳ್ಳಿಯ ಒಳಜಗಳ, ಕೌಟುಂಬಿಕ ಸಮಸ್ಯೆ, ಪಂಚಾಯ್ತಿ ಕಟ್ಟೆ, ಸಂತೆಗಳ ವರ್ಣರಂಜಿತ ಚಿತ್ರಗಳು, ಬಯಲಾಟ ನಾಟಕಗಳನ್ನು ಸಹೃದಯತೆಯಿಂದ ಮನತುಂಬಿಕೊಂಡು ರಸಾನು ಭೂತಿಯ ಔನ್ನತ್ಯಕ್ಕೇರುವ ಹಳ್ಳಿಗರ ಸಾಂಸ್ಕೃತಿಕ ಪ್ರಜ್ಞೆ ಗ್ರಾಮೀಣ ಜನತೆಯ ಜೀವನ ಪ್ರೀತಿಯನ್ನು ದರ್ಶಿಸುತ್ತದೆ. ಬಯಲುಸೀಮೆಯ ಗ್ರಾಮೀಣ ಸಂಸ್ಕೃತಿ ಜನಪದ ಗೀತೆಗಳನ್ನು ಬಳಸಿರುವ ರೀತಿಯಲ್ಲಿ ಪ್ರಾದೇಶಿಕ ವಿಶಿಷ್ಟತೆಗಳು ಅನಾವರಣಗೊಂಡಿವೆ. ಇದೇ ರೀತಿಯ ಗ್ರಾಮೀಣ ಬದುಕಿನ ಅನಾವರಣ 'ಹಳ್ಳಿಯ ಬದುಕು' ಕಾದಂಬರಿಯಲ್ಲೂ ಮೂಡಿಬಂದಿದೆ.

ಅವರ ಮಣ್ಣಿನ ಪ್ರೀತಿಯು ಪರಿಮಳಭರಿತ ಸಾಹಿತ್ಯ ಸುಮವಾಗಿ 'ಬೆಳುವಲದ ಮಡಿಲಲ್ಲಿ' ಕಾದಂಬರಿಯಲ್ಲಿ ಅರಳಿದೆ. 'ಹಳ್ಳಿಯ ಬದುಕ'ನ್ನು ಅನಾಮತ್ತಾಗಿ ಅನಾವರಣ ಮಾಡುವ ಈ ಎರಡು ಕಾದಂಬರಿಗಳು ಪ್ರಾದೇಶಿಕತೆಯ ವಿಶಿಷ್ಟತೆಯನ್ನು ನಿರೂಪಿಸುವಲ್ಲಿ ಸಫಲವಾಗಿವೆ.

ವೃತ್ತಿ ಜೀವನದ ಏಳುಬೀಳುಗಳ ನಡುವೆಯೂ ನಿರಂತರವಾಗಿ ಹುಟ್ಟಿದೂರಿನ ಬಾಂಧವ್ಯ ಅವರಿಗೆ ನವಚೈತನ್ಯವನ್ನು ಕೊಡುತ್ತಿತ್ತು. ಕೃಷಿ ಜೀವನದಲ್ಲಿ ನಿರತರಾಗಿದ್ದ ತಮ್ಮಂದಿರನ್ನು ನೋಡಲು ಅವರ ಕೆಲಸಗಳಿಗೆ ನೆರವಾಗಲು ಮಲ್ಲಿಗೇನಹಳ್ಳಿಗೆ ಹೋಗಿಬರುತ್ತಿದ್ದರು. ಚಿಕ್ಕಂದಿನಲ್ಲಿ ಸಣ್ಣದೊಂದು ಏಟು ಬಿದ್ದುದರಿಂದ ಕೈಗಳಿಂದ ನೇಗಿಲು ಹಿಡಿಯುವುದು ಅಸಾಧ್ಯವಾಯಿತು. ತಾನೊಂದು ಬಗೆದರೆ ದೈವವೊಂದು ಬಗೆಯಿತು ಎಂಬಂತೆ ದೈವಸಂಕಲ್ಪ ಅವರನ್ನು ಕನ್ನಡ ಸಾಹಿತ್ಯದ ಮುಂಚೂಣಿಯ ಸಾಹಿತಿಯನ್ನಾಗಿಯೂ, ಸಂಶೋಧಕ ದಿಗ್ಗಜರನ್ನಾಗಿಯೂ, ಗ್ರಂಥ ಸಂಪಾದನೆಯ ತಜ್ಞರನ್ನಾಗಿಯೂ ರೂಪಿಸುವ ಹುನ್ನಾರ ನಡೆಸಿತ್ತು.

ವಿದ್ಯಾಭ್ಯಾಸವನ್ನು ಮುಂದುವರಿಸಿದ ತಂದೆಯವರು ಬಹಳ ತೊಂದರೆಗಳ ಮಧ್ಯೆಯೂ ಸ್ನಾತಕೋತ್ತರ ಪದವಿಯನ್ನು ಪಡೆದರು. ಸಾಹಿತ್ಯ ಮುಕುಟಮಣಿಗಳಾದ, ಪ್ರೊ. ತೀ. ನಂ. ಶ್ರೀಕಂಠಯ್ಯನವರು, ಪ್ರೊ. ಬಿ.ಎಂ. ಶ್ರೀಕಂಠಯ್ಯನವರು, ಶ್ರೀ ಡಿ.ಎಲ್. ನರಸಿಂಹಾಚಾರ್ಯರು, ಪ್ರೊ.ಎಂ.ವಿ. ಸೀತಾರಾಮಯ್ಯನವರು ಮುಂತಾದ ವಿದ್ವಾಂಸರ ಶಿಷ್ಯರಾಗಿ ಸಾಹಿತ್ಯ ಪ್ರಜ್ಞೆಯನ್ನು, ಅಧ್ಯಯನ ಶೀಲತೆಯನ್ನೂ

೭

ಬೆಳೆಸಿಕೊಂಡರು. ಪೂರ್ವಜನ್ಮದ ಸುಕೃತವೆಂಬಂತೆ ದೊರಕಿದ್ದು, ಈ ಗುರುಶ್ರೇಷ್ಠರ ಮಾರ್ಗದರ್ಶನದಲ್ಲಿ ಸಾಹಿತ್ಯಾಭಿರುಚಿ ಕೊನರೊಡೆದು ಹೆಮ್ಮರವಾಗುವ ದಾರಿಯಲ್ಲಿ ಸುಗಮವಾಗಿ ಸಾಗಿತು. ಪೂಜ್ಯಗುರುಗಳಾದ ಪ್ರೊ.ಡಿ.ಎಲ್. ನರಸಿಂಹಾಚಾರ್ಯರ ಪ್ರಿಯ ಶಿಷ್ಯರಾದ ನಮ್ಮ ತಂದೆಯವರು ಸಂಶೋಧನೆ ಮತ್ತು ಗ್ರಂಥ ಸಂಪಾದನಾ ಶಾಸ್ತ್ರದಲ್ಲಿ ಒಲವನ್ನು ಬೆಳೆಸಿದವರು ಈ ಗುರುವರೇಣ್ಯರೇ ಆಗಿದ್ದರು. ಗ್ರಂಥ ಸಂಪಾದನೆ'ನ್ನು ಹೇಗೆ ಮಾಡಬೇಕೆಂಬುದನ್ನು, ಶಾಸ್ತ್ರೀಯ ರೀತಿಯಲ್ಲಿ, ನಿರ್ದಿಷ್ಟ, ನಿರ್ದುಷ್ಟ ನಿರ್ಣಯಗಳನ್ನು ಹೇಗೆ ತೆಗೆದುಕೊಳ್ಳಬೇಕು ಎಂಬುದನ್ನು ಪ್ರಿಯ ಶಿಷ್ಯನಿಗೆ ನಿರ್ವಂಚನೆಯಿಂದ ಧಾರೆ ಎರೆದರು.

'ಗ್ರಂಥ' ಸಂಪಾದನೆಯ ಕೌಶಲ್ಯ, ಪ್ರಖರ ವಿಶ್ಲೇಷಣೆಗಳು, ವೈಜ್ಞಾನಿಕ ರೀತಿಯಲ್ಲಿ ಅನುಸಂದಾನಗಳು ಗುರುಗಳ ಪ್ರೀತಿಯ ಬಳುವಳಿಯೋ ಎಂಬಂತೆ ತಂದೆಯವರಲ್ಲಿ ಕೈಗೂಡಿದ್ದುವು. ವಿಪರೀತ ವ್ಯಾಮೋಹಕ್ಕೆ ಒಳಗಾಗಿಯಾಗಲಿ ಅಥವಾ ಅತಿ ಪ್ರಶಂಸೆಯ ಪೂರ್ವಗ್ರಹಕ್ಕೆ ಒಳಗಾಗಿ ಆಗಲಿ, ಶ್ರೀ ದೇವೀರಪ್ಪನವರು ತಮ್ಮ ಅಭಿಪ್ರಾಯ, ನಿರ್ಣಯಗಳನ್ನು ಕೊಡಲಿಲ್ಲ. ಹಾಗೆಂದೇ ಅವರ ಸಂಶೋಧನೆ ಮತ್ತು ಗ್ರಂಥ ಸಂಪಾದನೆಗಳು ಇಂದಿಗೂ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡಿವೆ.

ವೀರಶೈವ ಸಾಹಿತ್ಯದ ಬಗ್ಗೆ. ಕವಿಕಾವ್ಯ ವಿಚಾರಗಳ ಬಗ್ಗೆ, ಮೌಲಿಕ ಅಭಿಪ್ರಾಯಗಳು ಪೂರ್ವಗ್ರಹಗಳಿಂದ ಮುಕ್ತವಾಗಿ ಆಳವಾದ ಅಧ್ಯಯನದಿಂದ ರೂಪಿತವಾದುವು. ಎಚ್. ದೇವೀರಪ್ಪನವರು ಸಂಪಾದಿಸಿರುವ ಹಂಪೆಯ ಹರಿಹರ ದೇವರ 'ಶರಣ ಚರಿತಮಾನಸಂ' ಎಂಬ ಕೃತಿಗೆ ಡಿ.ಎಲ್. ನರಸಿಂಹಾಚಾರ್ಯರು ಮುನ್ನುಡಿಯನ್ನು ಬರೆದಿದ್ದಾರೆ. ಸವಿಮರ್ಶ ಸಂಪಾದನಾ ಕಾರ್ಯವನ್ನು ಕುರಿತು ಮೆಚ್ಚುಗೆಯನ್ನು ಪ್ರಶಂಸೆಯನ್ನು ವ್ಯಕ್ತಪಡಿಸಿದ್ದಾರೆ.

ಗ್ರಂಥ ಸಂಪಾದನಾ ಕಾರ್ಯವು ಅವರ ಕರ್ತವ್ಯವಾಗುವುದರೊಂದಿಗೆ ಅತ್ಯಂತ ಪ್ರಿಯವಾದ ವಿಷಯವೂ ಆಗಿತ್ತು. ಓರಿಯಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್ ಇಲ್ಲಿ ನಿರ್ದೇಶಕರಾಗಿದ್ದಾಗ ಕರ್ನಾಟಕದ ಹಳ್ಳಿ, ಹಳ್ಳಿ, ಮೂಲೆಗಳಿಗೆ ಹೋಗಿ ಮೂಲ ಹಸ್ತಪ್ರತಿ, ಓಲೆಗರಿ, ತಾಡಪತ್ರಗಳನ್ನು ತರಬೇಕಾಗುತ್ತಿತ್ತು. ಪ್ರಾಚೀನ ಕಾವ್ಯ, ಶಾಸ್ತ್ರಗಳು 'ಓಲೆಗರಿ'ಯಲ್ಲಿ ಗ್ರಂಥಸ್ಥವಾಗಿವೆ. ಅತಿ ದೂರದ ಪ್ರದೇಶಗಳಿಗೆ ಬೇಸರವಿಲ್ಲದೆ ಹೋಗುತ್ತಿದ್ದರು. ಎಷ್ಟೋ ವೇಳೆ ವಾಹನ ವ್ಯವಸ್ಥೆಗಳು ಸರಿಯಾಗಿ ಇರದೇ ಆ ಪ್ರದೇಶಗಳಲ್ಲಿದ್ದ, ಲಭ್ಯವಾಗುವಂತಹ ಕುದುರೆಗಾಡಿಗಳಲ್ಲಿ ಹೋಗ ಬೇಕಾಗುತ್ತಿತ್ತು.

ಆಗ ಸಹ ನಿರುತ್ಸಾಹಿಗಳಾಗದೇ ಕಾಯಕವೇ ಕೈಲಾಸವೆಂಬಂತೆ, ಆರೋಗ್ಯ ಹದಗೆಡುವುದನ್ನೂ ಲಕ್ಷಿಸದೆ ಹಳ್ಳಿಗಾಡಿನ ಒಳಪ್ರದೇಶಗಳಿಗೆ ಹೋಗಿ ಬರುತ್ತಿದ್ದರು. ಯಾವ ಹಸ್ತಪ್ರತಿ, ಓಲೆಗರಿಗಳಲ್ಲಿ ಎಂಥ ಸಾಹಿತ್ಯ ರತ್ನಗಳು ಝಗಝಗಿಸುತ್ತಿವೆಯೋ ಯಾರಿಗೆ ಗೊತ್ತು. ಗ್ರಂಥ ಸಂಗ್ರಹಿಸುವುದಕ್ಕೆ ತಮ್ಮ ಆರೋಗ್ಯವನ್ನು ಪಣಕ್ಕಿಟ್ಟರು. ಇವುಗಳನ್ನು ತಂದು ಸಾಹಿತ್ಯ ನಿಧಿಯ ಗ್ರಂಥ ಸಂಪಾದನೆ ಮಾಡಿ, ಪಾಠಾಂತರಗಳ ಅರಣ್ಯಗಳಲ್ಲಿ ತೊಳಲಾಡಿ ಶುದ್ಧ, ನಿಜವಾದ ಅಂಶಗಳನ್ನು ಕಂಡುಹಿಡಿಯುವುದರಲ್ಲಿ ನಿಷ್ಣಾತರಾಗಿದ್ದರು. ನಿವೃತ್ತರಾಗುವ ವೇಳೆಗೆ ಕನ್ನಡ, ಸಂಸ್ಕೃತಗಳ ಸುಮಾರು ೧೧,೦೦೦ ಓಲೆಗರಿಗಳ ಪ್ರತಿಗಳನ್ನು ಸಂಗ್ರಹಿಸಿದ್ದರು. ೫೦ಕ್ಕೂ ಮೀರಿ ಗ್ರಂಥಗಳನ್ನು 'ಸಂಪಾದಿಸಿ'ಪ್ರಕಟಿಸಿದ್ದರು. ಹಸ್ತಪ್ರತಿಗಳ ಪ್ರಾಚೀನ ಹಳಗನ್ನಡ ನಡುಗನ್ನಡಗಳ ಅಕ್ಷರಗಳು ಸ್ಫುಟವಾಗಿ ಕಾಣಲೆಂದು, ಈ ಉದ್ದೇಶಕ್ಕೋಸ್ಕರ ಬಳಸಲಾಗುತ್ತಿದ್ದ ವಿಶೇಷವಾದ ಆಯುರ್ವೇದದ ಎಣ್ಣೆಯನ್ನು ನಾಜೂಕಾಗಿ ಭೂತಗನ್ನಡಿಯಲ್ಲಿ ಸೂಕ್ಷ್ಮವಾಗಿ ನಿರೂಕಿಸಿ ಪಾಠಾಂತರವನ್ನು ನಿರ್ಣಯಿಸುತ್ತಿದ್ದ ಪರಿ ಅದ್ಭುತವಾಗಿರುತ್ತಿತ್ತು.

ಯಾವುದೇ ಸಂದರ್ಭದಲ್ಲಿ ಆಕರ ಗ್ರಂಥಗಳನ್ನು ಪರಿಶೀಲಿಸದೇ ಅಥವಾ ಸಂದೇಹಾಸ್ಪದ ಪ್ರಸಂಗ, ಶಬ್ದಾರ್ಥಗಳನ್ನು ವಿವರಿಸುವಾಗ ಗಟ್ಟಿಯಾದ ಸಾಕ್ಷಿ. ಆಧಾರಗಳಿಲ್ಲದೇ ಪ್ರಮಾಣೀಕರಿಸುತ್ತಿರಲಿಲ್ಲ. ತಾಳೆಗರಿ, ಹಸ್ತಪ್ರತಿಗಳ ನಡುವೆ ಅಡಗಿ ಕುಳಿತಿದ್ದ ಅನೇಕ ಉತ್ತಮ ಕೃತಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದುವು. ಪ್ರಾಚೀನ ಸಾಹಿತ್ಯವೆಂದರೆ ಕರ್ನಾಟಕ ಇತಿಹಾಸದ ಜೀವಂತ ಸಾಕ್ಷಿಗಳು: ಕರ್ನಾಟಕದ ರಾಜಕೀಯ ಇತಿಹಾಸವನ್ನು ಉಜ್ವಲಗೊಳಿಸುವುದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಪಾತ್ರ ಅತ್ಯಂತ ಹಿರಿದು; ಹೆಚ್ಚಿನದು. ತಾವು ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಕಛೇರಿಯಲ್ಲಿ ತಮ್ಮ ಸಹೋದ್ಯೋಗಿಗಳೊಂದಿಗೂ, ನೌಕರ ವರ್ಗದವರೊಂದಿಗೂ ಬಹಳ ಸಹಾನುಭೂತಿಯಿಂದ ವರ್ತಿಸುತ್ತಿದ್ದರು. ಸಹನಶೀಲತೆಯಿಂದ, ಅವರಿಂದ ಕೆಲಸ ಮಾಡಿಸುತ್ತಿದ್ದರು. ನೌಕರ ವರ್ಗದವರೊಂದಿಗೆ ಅವರ ಸುಖ-ದುಃಖಗಳಿಗೆ ಸ್ಪಂದಿಸಿ, ತೆಗೆಯುವುದಕ್ಕಿಂತ ಒಳ್ಳೆಯ ಮಾತಿನಲ್ಲಿ, ಸ್ವಯಂ ಪ್ರೇರಣೆಯಿಂದ, ಕೆಲಸ ಮಾಡುವಂತೆ ಸ್ಫೂರ್ತಿ ತುಂಬುತ್ತಿದ್ದರು. ಮಾನವೀಯತೆಯ ಈ ಮಹಾನ್ ಗುಣವೇ ಅವರನ್ನು ಮಹಾನ್ ವ್ಯಕ್ತಿಯನ್ನಾಗಿ ಮಾಡಿತ್ತು.

ಕ್ರಿ.ಶ. ೧೨೦೦ ಸುಮಾರಿನಿಂದ ೧೬೦೦ರ ಒಳಗೆ ಜೀವಿತವಿದ್ದ ಶ್ರೀ ಪಂಪಾ ವಿರೂಪಾಕ್ಷನ 'ಸಾಕ್ಷಾತ್ ಸುಪುತ್ರ'ನಾದ ಮಹಾಶಿವಭಕ್ತ, ಮಹಾಕವಿ ಹಂಪೆಯ ಹರಿಹರದೇವ ನಮ್ಮ ತಂದೆಯವರ ಅಚ್ಚುಮೆಚ್ಚಿನ ಕವಿ, ರಗಳೆಯ ಛಂದಸ್ಸಿನ ಭಕ್ತಿರಸ ಪ್ರಧಾನವಾದ ಕೃತಿಗಳನ್ನು ಸರ್ವಾಂಗ ಸುಂದರವಾಗಿ, ಸವಿಮರ್ಶಿಸಿ ಸಂಪಾದಿಸಿರುವುದು. ಸಂಪಾದನೆ ಪ್ರತಿಭೆಗೂ, ಸಹೃದಯದ, ಕಲಾಭಿಜ್ಞತೆಗೂ ಒಂದು ಉದಾಹರಣೆ. ಮಹಾಶಿವಭಕ್ತನಾದ ಹರಿಹರನಿಗೆ ವಿರೂಪಾಕ್ಷನಲ್ಲಿದ್ದ ಅಗಾಧಭಕ್ತಿ-ತಂದೆಯವರಿಗೆ ಹರಿಹರನ ಬಗೆಗೆ ಇತ್ತು. ಹರಿಹರ ಕವಿಯ ಆಮೂಲಾಗ್ರ ಅಧ್ಯಯನ, ಸಂಶೋಧನೆ, ಕಾವ್ಯಾನುಸಂಧಾನ, ತೌಲನಿಕ ವಿಮರ್ಶೆ ರಗಳೆ ಛಂದಸ್ಸಿಗೆ ಹರಿಹರ ತಂದುಕೊಟ್ಟ ಮಹತ್ವದ ಬಗೆಗಿನ ಲೇಖನಗಳು, ಕೃತಿಗಳು ಬಹಳಷ್ಟಿವೆ. ಕೇಂದ್ರ ಸಾಹಿತ್ಯ ಅಕಾಡೆಮಿಯವರು, ತಂದೆಯವರಿಂದ ಬರೆಯಿಸಿರುವ 'ಹಂಪೆಯ ಹರಿಹರ' ಕೃತಿಯಲ್ಲಿ ಹರಿಹರನ ಸಾಧನೆಗಳ ಸಮಗ್ರ ಚಿತ್ರಣವಿದೆ. ವಿರೂಪಾಕ್ಷಾಂಕಿತವುಳ್ಳ, ೪೨ ರಗಳೆಗಳನ್ನು ಸಂಪಾದಿಸಿ 'ಶಿವಶರಣ ಸಂಪುಟ'ವನ್ನು ಹೊರತಂದರು. 'ಶರಣ ಚರಿತಮಾನಸ'ದಲ್ಲಿ, ಪೀಠಿಕಾ ಭಾಗದಲ್ಲಿ 'ರಗಳೆ'ಯ ಛಂದಸ್ಸಿನ ವಿಚಾರ, ವಿಮರ್ಶೆ, ವಿದ್ವತ್ತು, ಪ್ರತಿಭೆಗೆ ಸಾಕ್ಷಿಯಾಗಿದೆ.

ಹರಿಹರ ಕವಿಯ ಬಗ್ಗೆ ಅಧಿಕಾರಯುಕ್ತವಾಗಿ, ನಿಖರ ಅಭಿಪ್ರಾಯಗಳನ್ನು ಕೊಡಬಲ್ಲ ಕೆಲವೇ ವಿದ್ವನ್ಮಣಿಗಳಲ್ಲಿ ತಂದೆಯವರು ಪ್ರಖರವಾಗಿ ಪ್ರಜ್ವಲಿಸಿದರು. ಬಾಲ್ಯದಲ್ಲಿ, ಹಳ್ಳಿಗಳಲ್ಲಿ ನೋಡುತ್ತಿದ್ದ ನಾಟಕದ ಪ್ರಭಾವ ಮನಸ್ಸಿನಲ್ಲಿ ಅಚ್ಚಳಿಯದೆ ಇತ್ತು. ತಂದೆಯವರ ಮನಃಪಟಲದಲ್ಲಿ, ಹೃತ್ಕಮಲದಲ್ಲಿ ಭಕ್ತಕವಿ ಹರಿಹರ ರಾರಾಜಿಸುತ್ತಿದ್ದ. 'ತುಂಗಭದ್ರ', ಹರಿಹರ ರಾಘವಾಂಕರ ಜೀವನದ ಘಟನೆಗಳನ್ನು ಆಧರಿಸಿ ಬರೆದ ನಾಟಕ. ಹೃದಯಂಗಮ ಸನ್ನಿವೇಶಗಳನ್ನು ಒಳಗೊಂಡು, ನಾಟಕತತ್ತ್ವಗಳನ್ನು ಆಧರಿಸಿ ಬರೆದ ನಾಟಕ ರಂಗಭೂಮಿಯ ಮೇಲೆ ಸೊಗಸಾಗಿ ಮೂಡಿಬರುವಂಥದು.

ಸಂಶೋಧನೆ, ಪ್ರಕಟಣೆ, ಗ್ರಂಥ ಸಂಪಾದನೆಯ ಕ್ಲಿಷ್ಟಕರವಾದ ಜವಾಬ್ದಾರಿಯುತ ಕೆಲಸಗಳ ನಡುವೆಯೂ, ಸಾಹಿತ್ಯ ಸೃಜನಶೀಲತೆಯ ಅದಮ್ಯ ಉತ್ಸಾಹ ಪುಟದೇಳುತ್ತಿತ್ತು. ಸಣ್ಣಕತೆಗಳ ಸಂಕಲನವಾದ 'ಸುವರ್ಣ ಸಂಪುಟ', ಕಾದಂಬರಿ 'ಬೆಳುವಲದ ಮಡಿಲಲ್ಲಿ'. 'ಹಳ್ಳಿಯ ಬದುಕು' ಇವುಗಳು, 'ಕಲಾಯೋಗಿ', 'ತುಂಗಭದ್ರಾ' ನಾಟಕಗಳು ಅವರ ಪ್ರತಿಭೆಗೆ ಸಾಕ್ಷಿಯಾಗಿವೆ. ಸಂಪಾದಿಸಲ್ಪಟ್ಟ, ವೀರಶೈವ ಸಾಹಿತ್ಯ ಕೃತಿಗಳೂ ಪಾಂಡಿತ್ಯ ಮತ್ತು ಸತ್ವಾಂಶಗಳನ್ನು ಒಳಗೊಂಡಿವೆ.

ನಿರಂತರ ಸಾಹಿತ್ಯಾಭ್ಯಾಸವು ತಂದೆಯವರಿಗೆ ಉಸಿರಾಟದಷ್ಟೇ ಸಹಜವೂ, ಅಗತ್ಯವೂ ಆಗಿತ್ತು. ಪುಸ್ತಕಗಳ ರಾಶಿಯ ಮಧ್ಯೆ ಕುಳಿತು ಓದುವುದು ಬರೆಯುತ್ತಿರುವುದನ್ನು ಮನೆಗೆ ಬರುವವರು ದಿನನಿತ್ಯ ನೋಡುತ್ತಿದ್ದರು. ಬದುಕಿನ ಉದ್ದಕ್ಕೂ ಸಾಹಿತ್ಯದೊಂದಿಗೆ ಬೆಸೆದುಕೊಂಡಿದ್ದ ಗಾಢವಾದ ಸಂಬಂಧ ಅವರನ್ನು ನಾನಾ ಸಂಸ್ಥೆಗಳೊಂದಿಗೆ ಕಟ್ಟಿಹಾಕಿತ್ತು. ಕನ್ನಡ ಸಾಹಿತ್ಯ ಪರಿಷತ್ತು, ಕೇಂದ್ರ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಈ ಸಂಸ್ಥೆಗಳೊಂದಿಗೆ ಅವರ ಒಡನಾಟ ನಿರಂತರವಾಗಿತ್ತು.

ಅವರು ಅಡಂಬರದ ಆಟಾಟೋಪಗಳಿಗೆ ಅತಿದೂರ. ತಮ್ಮ ವಿದ್ವತ್ತಿನ ವಿಜೃಂಭಣೆಯನ್ನು ಎಂದೂ ಮಾಡಲಿಲ್ಲ. ಬಸವೇಶ್ವರರ ವಚನದಂತೆ 'ಎನಗಿಂತ ಕಿರಿಯರಲಿಲ್ಲ' ಎಂಬಂತೆ ಇದ್ದರು. ಪ್ರತಿಭೆ ಪಾಂಡಿತ್ಯವಿದ್ದರೂ ನಿಗರ್ವಿ. ತಮಗೆ ಗೊತ್ತಿದ್ದುದನ್ನು ಬೇರೆಯವರು ಉಪಯೋಗಿಸಿಕೊಂಡು ದೊಡ್ಡವರಾಗಿ ಬಿಡುತ್ತಾರೆಂಬ ಸಂಕುಚಿತ ಮನೋಭಾವ ಅವರಲ್ಲಿ ಸುತರಾಂ ಇರಲಿಲ್ಲ. ಅವರ ಮಿತ್ರರೊಂದಿಗೆ ನಡೆಸುತ್ತಿದ್ದ ಸಹೃದಯ ಸಂವಾದವು ಸಾಹಿತ್ಯಕ ಸೌಂದರ್ಯದ ನವನೀತವನ್ನು ಮಥಿಸಿ ತೆಗೆಯುತ್ತಿತ್ತು. ಸಂವಾದದ ನಡುವೆ ಹಾರಿಸುತ್ತಿದ್ದ ಸದಭಿರುಚಿಯ ಹಾಸ್ಯದ ಚಟಾಕಿಗಳು ಕೇಳುಗರನ್ನು ನಗೆಗಡಲಲ್ಲಿ ಮುಳುಗಿಸುತ್ತಿದ್ದವು. ಗೌರವ ಸನ್ಮಾನಗಳು ಅವರನ್ನು ಹುಡುಕಿಕೊಂಡು ಬಂದುವೇ ಹೊರತು ಅವರಾಗಿ ಅರಸಿಕೊಂಡು ಹೋಗಲಿಲ್ಲ. ಗುರು-ಹಿರಿಯರಲ್ಲಿ ವಿನಮ್ರ ಭಕ್ತಿ, ಕಿರಿಯರಲ್ಲಿ ಪ್ರೀತಿ, ವಿಶ್ವಾಸ ಸಮವಯಸ್ಕರಲ್ಲಿ ಸ್ನೇಹ ಸೌಹಾರ್ದ ಅವರ ಕಲ್ಯಾಣಗುಣಗಳ ಮತ್ತೊಂದು ಮುಖ. ಧನಾರ್ಜನೆ ಎಂದೂ ಅವರ ಸ್ವಭಾವಕ್ಕೆ ಒಗ್ಗಿಬರಲಿಲ್ಲ. ಶಿವಕೊಟ್ಟದ್ದನ್ನು 'ಮಹಾಪ್ರಸಾದ' ಎಂದು ಸ್ವೀಕರಿಸಿ ಅಲ್ಪತೃಪ್ತಿ ಯಿಂದ ಇರುವುದೇ ಶರಣಪಥ ಎಂದು ಅರಿತವರು. ತಾವು ಬೆಂಗಳೂರಿನಲ್ಲಿ ಕಟ್ಟಿಸಿದ ಮನೆಗೆ ಸಹ 'ಹರಿಹರ'ಎಂದು ಹೆಸರನ್ನು ಇಟ್ಟು, ಸಂತೋಷಿಸಿದ್ದರು.

ಮನೆಯಲ್ಲಿ ತಂದೆಯವರು ಆಗಾಗ 'ಶಿವಶಿವಾ' ಎಂದು ಶಿವಸ್ಮರಣೆ ಮಾಡುತ್ತಿದ್ದುದು ದೇವಾಲಯದಲ್ಲಿ ಗಂಟೆ ಬಾರಿಸಿದಷ್ಟೇ ಪವಿತ್ರ ವಾತಾವರಣವನ್ನು ಸೃಷ್ಟಿಸುತ್ತಿತ್ತು. ಸ್ನಾನಾನಂತರ ಶಿವಪೂಜೆ ಮಾಡಿ ವಿಭೂತಿ ಧರಿಸಿದರೆಂದರೆ ಬಸವೇಶ್ವರ, ಹರಿಹರ, ಪರಮಭಕ್ತ ಶಿವಶರಣರ ಅಪರಾವತಾರವಾಗಿ ಕಾಣಿಸುತ್ತಿದ್ದರು. ತಾಯಿಯವರು ತಯಾರಿಸುತ್ತಿದ್ದ ಊಟ-ತಿಂಡಿಯನ್ನು ತೃಪ್ತಿಯಿಂದ ಸ್ವೀಕರಿಸುತ್ತಿದ್ದರು. ಅವರ ಬಗ್ಗೆ ಟೀಕೆಯಾಗಲೀ, ವಿಮರ್ಶೆಯಾಗಲೀ, ಅಸಹನೆ ಯನ್ನಾಗಲೀ, ಎಳ್ಳಷ್ಟೂ

ಪ್ರದರ್ಶಿಸುತ್ತಿರಲಿಲ್ಲ. ಶೇಕಡಾ ೯೦ರಷ್ಟು ಸ್ತ್ರೀಯರಿಗೆ ಈ ರೀತಿಯ ಭಾಗ್ಯ ಸಿಗುವುದಿಲ್ಲ ; ಇದು ನಮ್ಮ ತಾಯಿಗೆ ಸಿಕ್ಕಿತ್ತು. ಆಹಾರದ ವಿಷಯದಲ್ಲಿ ಶಿವನ ಮಹಾಪ್ರಸಾದ ಎಂದು ಸ್ವೀಕರಿಸುತ್ತಿದ್ದರು. ನಾಲ್ಕು ಜನ ಮಕ್ಕಳು ವಿದ್ಯಾವಂತರೂ, ಉದ್ಯೋಗಸ್ಥರೂ, ಸುಸಂಸ್ಕೃತರೂ ಆಗಿದ್ದು ಅವರಿಗೆ ತೃಪ್ತಿ ತಂದಿತ್ತು. ಮಗ ವಿದ್ಯುಚ್ಛಕ್ತಿ ವಿಭಾಗದಲ್ಲಿ ಉನ್ನತ ಹುದ್ದೆಗೇರಿದ್ದು ಹೆಮ್ಮೆಯೆನಿಸಿತ್ತು.

ನನ್ನ ತಂದೆಯವರು ವಿವಿಧ ಭಕ್ಷ್ಯಭೋಜ್ಯಗಳೇನೇ ಇರಲಿ, ತಮ್ಮ ಹಳ್ಳಿಗಾಡಿನ ತಿನಿಸುಗಳನ್ನು ಬಹಳ ಇಷ್ಟಪಡುತ್ತಿದ್ದರು. ಹಾಲ್ಕಿ, ರಾಗಿಮುದ್ದೆ, ಸೊಪ್ಪಿನಸಾರು ರೈತಾಪಿ ಜನಗಳ ಮನೆಗಳಲ್ಲಿ ರೂಢಿಯಲ್ಲಿದ್ದ ತಿನಿಸುಗಳೆಂದರೆ ವಿಶೇಷ ಪ್ರೀತಿ, ವಿಶೇಷ ರುಚಿ. ಅವರ ಸರಳ ಸ್ವಭಾವದಂತೆಯೇ ತಿನ್ನುವುದರಲ್ಲಿಯೂ ಸರಳವಾದ ಆರೋಗ್ಯಕ್ಕೆ ಹಿತಕರವಾದ ತರಕಾರಿ, ತಿನಿಸುಗಳನ್ನು ಸೇವಿಸುತ್ತಿದ್ದರು.

ಸೌಮ್ಯ ಸ್ವಭಾವದ ತಂದೆಯವರು ಸಿಟ್ಟು, ಸೆಡವುಗಳಿಂದ ಬಲು ದೂರ. ನಾವು ನಾಲ್ಕು ಜನ ಮಕ್ಕಳು. ಎಂದೂ ಯಾರ ಮೇಲೂ ಅತಿಯಾದ ಸಿಟ್ಟು ತೋರಿಸಲಿಲ್ಲ. ಕೆಟ್ಟ ಶಬ್ದಗಳಲ್ಲಿ ಬಯ್ಯುತ್ತಿರಲಿಲ್ಲ. ಬುದ್ಧಿಮಾತುಗಳಿಂದ ನಮ್ಮ ನಡವಳಿಕೆಯನ್ನು ತಿದ್ದಿಕೊಳ್ಳಲು ಹೇಳುತ್ತಿದ್ದರು. ನೆರೆಹೊರೆಯವರೊಡನೆ ಒಳ್ಳೆಯ ಸಂಬಂಧ, ಸಂಘ ಸಂಸ್ಥೆಗಳೊಂದಿಗೆ ಸೌಹಾರ್ದಯುತ ವ್ಯವಹಾರ ಅವರ ಮೌಲ್ಯಾಧಾರಿತ ಜೀವನಕ್ಕೆ ಭದ್ರಬುನಾದಿಯನ್ನು ಹಾಕಿತ್ತು. ಶಿವಶರಣರೆಂದರೆ ಅತಿಯಾದ ಪ್ರೀತಿ, ವಚನಗಳನ್ನು ಸಂಶೋಧಿಸಿ, ಪ್ರಕಟಿಸಿದ ಶ್ರೀ ಪ.ಗು. ಹಳಕಟ್ಟಿಯವರೆಂದರೆ ಅವರಿಗೆ ಮಹಾಗುರುಗಳ ಸಮಾನ. ಶಿವಶರಣರ ಸತ್ಸಂಗದಲ್ಲಿ ಸಂವಾದ ನಡೆಸುವುದು ಬದುಕಿನ ಪುಣ್ಯ ಎಂದು ಹೇಳುತ್ತಿದ್ದರು. ತರಳಬಾಳು ಜಗದ್ಗುರುಗಳು, ಚಿತ್ರದುರ್ಗದ ಮುರುಘಾಮಠದ ಶ್ರೀಗಳು, ತುಮಕೂರಿನ ಸಿದ್ಧಗಂಗಾಮಠದ ತ್ರಿವಿಧ ದಾಸೋಹಿ ಶ್ರೀ ಶಿವಕುಮಾರ ಸ್ವಾಮಿಗಳವರು ತಮ್ಮ ಸನ್ನಿಧಿಗೆ ತಂದೆಯವರನ್ನು ಆಗಾಗ ಕರೆಯಿಸಿ ವೀರಶೈವ ಸಾಹಿತ್ಯದ ವಿವಿಧ ಸಾಹಿತ್ಯ ಪ್ರಕಾರಗಳ ವಿಷಯವಾಗಿ ಮತ್ತು ಶರಣ, ಕವಿಗಳ ವಿಷಯವಾಗಿ ದೀರ್ಘ ಸಮಯದ ಸಮಾಲೋಚನೆ, ಚರ್ಚೆ ನಡೆಸುತ್ತಿದ್ದರು. ಈ ಶ್ರೀ ಮಠಗಳಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಧಾರ್ಮಿಕ ಸಮಾರಂಭಗಳಿಗೆ, ಸಾಹಿತ್ಯಕ ಸಮಾವೇಶಗಳಿಗೆ ಸಾಮಾಜಿಕ ಸಂಘಟನೆಗಳಿಗೆ, ತಂದೆಯವರಿಗೆ ಗೌರವಯುತ ಆಹ್ವಾನವೂ, ಸಪ್ರೇಮ ಸ್ವಾಗತವೂ, ವಾತ್ಸಲ್ಯಮಯ ಉಪಚಾರವೂ ಲಭ್ಯವಾಗುತ್ತಿತ್ತು. ಸುತ್ತೂರು ಮಠದ ಶ್ರೀಗಳು, ತಂದೆಯವರ ವಾಸ್ತವ್ಯ ಮೈಸೂರಿನಲ್ಲಿಯೇ ಇದ್ದುದರಿಂದ

ಮತ್ತೆ ಮತ್ತೆ ತಮ್ಮ ಸನ್ನಿಧಿಗೆ ಕರೆಯಿಸಿ ವೀರಶೈವ ಸಾಹಿತ್ಯ ಮತ್ತು ಸಮಾಜದಲ್ಲಿ ಶರಣ ಸಂಸ್ಕೃತಿಯನ್ನು ವಿದ್ಯಾರ್ಥಿ ದಸೆಯಿಂದಲೇ ಬೆಳೆಯಿಸಿ, ಪ್ರಚಾರ ಮಾಡುವುದರ ಬಗೆಗಿನ ಅನುಷ್ಠಾನಗಳ ವಿಚಾರವಾಗಿ ಮಾತನಾಡುತ್ತಿದ್ದರು. ಹೀಗೆ ಎಲ್ಲ ಧಾರ್ಮಿಕ ಗುರುಗಳ ಶುಭಾಶೀರ್ವಾದ ಅನವರತ ತಂದೆಯವರನ್ನು ಕಾಯುತ್ತಿತ್ತು. ಬಸವ ಸಮಿತಿ, ವೀರಶೈವ ಸಂಘಟನೆಗಳು ಕರ್ನಾಟಕದಾದ್ಯಂತ ಹರಡಿರುವ ಬಸವತತ್ತ್ವ ಪ್ರಚಾರ ಸಂಘ, ಸಂಸ್ಥೆಗಳು ತಂದೆಯವರ ಸಲಹೆ, ಸೂಚನೆಗಳನ್ನು ಅಮೂಲ್ಯ ಸಂಘಟನಾತ್ಮಕ ಪ್ರಕ್ರಿಯೆಗೆ ಸ್ಫೂರ್ತಿಯನ್ನು ಕೊಡುತ್ತಿದ್ದರು. ಈ ಎಲ್ಲ ಸೇವೆಗಳನ್ನು ಎಲೆಮರೆಯ ಕಾಯಿಯಾಗಿ ಅಬ್ಬರದ ಪ್ರಚಾರಕ್ಕೆ ಆಸೆಪಡದೇ ಮಾಡುತ್ತಿದ್ದರು.

ತಂದೆಯವರು ಜೀವನದಲ್ಲಿ ಧರ್ಮವನ್ನು ಅಳವಡಿಸಿಕೊಂಡಿದ್ದರು ಎನ್ನುವುದಕ್ಕಿಂತಾ ಧರ್ಮವೇ ಜೀವನ ಶೈಲಿ ಆಗಿತ್ತು ಎನ್ನಲು ಅಡ್ಡಿಯಿಲ್ಲ. ಧಾರ್ಮಿಕ ನಂಬಿಕೆಯನ್ನಷ್ಟೇ ರೂಢಿಗೆ ತಂದರೆ ಸಾಲದು, ಧರ್ಮ ಮತ್ತು ಶಿವಶರಣರ ಸೂಳ್ನುಡಿಗಳು ಅನುಷ್ಠಾನಕ್ಕೆ ತರಬೇಕು ಎಂದು ಅವರ ಆದರ್ಶವಾಗಿತ್ತು. ವೈಯಕ್ತಿಕ ಸ್ವಾತ್ವಿಕ ಜೀವನದಲ್ಲಿಯೇನೋ ಈ ಆದರ್ಶ ಪರಿಪಾಲನೆಯನ್ನು ಅವರು ಅಕ್ಷರಶಃ ಮಾಡಿದರು. ಪರಿಪಾಲಿಸದೇ ಇರುವ ಆದರ್ಶಗಳ ಬಗ್ಗೆ ಕೇವಲ ಗೌರವ ಪ್ರದರ್ಶನ ವ್ಯರ್ಥವೆಂದು ನಂಬಿದ್ದರು.

ಧರ್ಮವು ಎಲ್ಲ ಆಯಾಮಗಳಲ್ಲಿ ವ್ಯಾಪಿಸಿ ಪ್ರತಿಷ್ಠಾಪನೆ ಪಡೆಯಬೇಕೆಂಬುದು ಅವರ ಅಂತರಂಗದ ಆಸೆಯಾಗಿತ್ತು. ಸಾಮಾಜಿಕ ಆಯಾಮದಲ್ಲಿ. ಆರ್ಥಿಕ ಆಯಾಮಗಳಲ್ಲಿ ರಾಜಕೀಯ ರಂಗದ ಆಯಾಮದಲ್ಲಿ ಧಾರ್ಮಿಕ ನೆಲೆ, ನೆಲೆಯ ಸತತ ಸ್ತೋತ್ರವು ಶ್ರೀ ಬಸವೇಶ್ವರರ 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬ ಸುಂದರ ಕನಸು ನನಸಾಗಬೇಕೆಂದು ಬಯಸಿದರು. ಇದಕ್ಕೆ ವೈಯಕ್ತಿಕ ಕಾಣಿಕೆ ಸಲ್ಲಿಸಿದರು.

ಮಲ್ಲಿಗೇನಹಳ್ಳಿಯ ಈ ಮಲ್ಲಿಗೆಯನರುಗಂಪು ಕರ್ನಾಟಕದಾದ್ಯಂತ ಪಸರಿಸಿತು. ಸಾಹಿತ್ಯಾಭಾಸಿಗಳಿಗೆ ಸಾಮಾನ್ಯ ಜನತೆಗೂ ಚಿರಪರಚಿತವಾಯಿತು. ವಿದ್ಯಾರ್ಜನೆ, ಧನಾರ್ಜನೆ, ಸತ್ಕೀರ್ತಿಯ ಸಂಪಾದನೆ ಮಾಡಿದವರಾದರೂ ನಮ್ಮ ತಂದೆ ಶ್ರೀ ದೇವೀರಪ್ಪನವರು ನಗರಗಳಲ್ಲಿ ಐವತ್ತು ವರ್ಷಗಳು ವಾಸವಿದ್ದರೂ ಗ್ರಾಮೀಣ ಬದುಕಿನ ವ್ಯಾಮೋಹ ಅವರನ್ನು ಎಂದಿಗೂ ಬಿಡಲಿಲ್ಲ; ಕಡೆಯ ಉಸಿರು ಇರುವವರಿಗೂ ಹಳ್ಳಿಯ ಬದುಕಿನತ್ತ ಹಾತೊರೆದು, ಹಂಬಲಿಸಿ, ಹಸಿರಲ್ಲೆ

ಹಾರಬಯಸುತ್ತಿತ್ತು. ಈ ಶರಣ ಚೈತನ್ಯಕ್ಕೆ ನಮೋ ನಮಃ ಕೆಳಗಿನ ವಚನವು ಅವರ ಬದುಕಿನಲ್ಲಿ ಅಕ್ಷರಶಃ ಸತ್ಯವಾಗಿತ್ತು.

"ಭಕ್ತಿಯೆಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು, ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣು ತೊಟ್ಟು, ಬಿಟ್ಟು, ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ"

## ೩. ನಮ್ಮ ಮಾವನವರಾದ ಶ್ರೀ ಎಚ್. ದೇವೀರಪ್ಪ

- ಡಾ. ಪಿ. ಬಸಪ್ಪ

ನನ್ನ ಹುಟ್ಟೂರು ಬಾಗವಾಡಿ, ಹೊನ್ನಾಳಿ ತಾಲೂಕಿನ ಒಂದು ಹಳ್ಳಿ. ತುಂಗಭದ್ರ ನದಿಯ ಬಲದಂಡೆಯಲ್ಲಿದೆ. ಆ ಕಡೆ ಚೀಲೂರು ಎಂಬ ದೊಡ್ಡಹಳ್ಳಿ, ತುಂಗಭದ್ರ ನದಿಯ ಎಡದಂಡೆಯಲ್ಲಿ. ನನ್ನ ವಿದ್ಯಾಭ್ಯಾಸ ನಮ್ಮೂರಲ್ಲಿ ೩ ವರ್ಷ, ಚೀಲೂರಲ್ಲಿ ೪ ವರ್ಷ, ನ್ಯಾಮತಿಯಲ್ಲಿ ಲೋಯರ್ ಸೆಕಂಡರಿ. ನಂತರ ಹೊನ್ನಾಳಿ ಶಿವಮೊಗ್ಗ. ನ್ಯಾಮತಿಯಲ್ಲಿ ಓದುವಾಗ, ನನ್ನ ಸಹಪಾಠಿ ಬಿ. ಈಶ್ವರಪ್ಪ (ನಮ್ಮೂರಿನವರು) ಹೈಸ್ಕೂಲು ಮೊದಲನೆಯ ತರಗತಿಯಲ್ಲಿ ಓದುತ್ತಿದ್ದರು. (೧೯೪೯-೫೦ ರಲ್ಲಿ) ಅವರಿಗೆ ಎಚ್. ದೇವಿರಪ್ಪನವರು ಬರೆದ 'ಹಳ್ಳಿಯ ಬದುಕು' ಎಂಬ ಕನ್ನಡ ಪುಸ್ತಕ ಪಠ್ಯಪುಸ್ತಕವಾಗಿತ್ತು. ೧೯೪೯-೫೦ರಲ್ಲೇ ಎಚ್. ದೇವೀರಪ್ಪನವರ ಬಗ್ಗೆ ಅಗಾಧ ಗೌರವ, ಪೂಜ್ಯಭಾವ ಶುರುವಾಯಿತು. ಅವರನ್ನು ನೋಡುವ ಆಸೆಯಾಗಿತ್ತು. ಆದರೆ ೧೯೬೨ರ ವರೆಗೆ ಅವರನ್ನು ನೋಡಲು ಆಗಿರಲಿಲ್ಲ.

೧೯೬೨ರಲ್ಲಿ ಸುಸಂದರ್ಭವೊದಗಿ ಬಂತು. ನನ್ನ ವಿದ್ಯಾಬ್ಯಾಸ ಎಸ್.ಎಸ್.ಎಲ್.ಸಿ. ಮೊದಲನೇ ದರ್ಜೆ, ಇಂಟರ್ ಮೀಡಿಯಟ್ ಪಾಸಾಗಿ ೧೯೫೬ನೆ ಇಸ್ವಿಯಲ್ಲಿ ಪಶುವೈದ್ಯಕೀಯ ವಿಜ್ಞಾನ ಓದಲು ನನಗೆ ಒರಿಸ್ಸಾದ ಕಟಕ್ ಭುವನೇಶ್ವರಕ್ಕೆ ಕರ್ನಾಟಕ ಸರ್ಕಾರದಿಂದ ಕಳಿಸಲಾಯಿತು.

ನಾನು ಶಿವಮೊಗ್ಗದಲ್ಲಿ ಓದುವಾಗ ಮಲ್ಲಿಗೇನಹಳ್ಳಿಯ ಎಸ್. ತೀರ್ಥಪ್ಪ, ಡಿ. ಬಸಪ್ಪ, ವಕೀಲರುಗಳು ಇವರ ಪರಿಚಯವಿತ್ತು. ನಾಲ್ಕು ವರ್ಷದ ಬಿ.ವಿ.ಎಸ್ಸಿ ಪದವಿ ಮುಗಿಸಿ ೧೯೬೦ರಲ್ಲಿ ವಾಪಾಸ್ಸು ಮನೆಗೆ ಬಂದೆ. ೧೯೬೦ರಲ್ಲಿ ಪಶುವೈದ್ಯರಾಗಿ ಮೊದಲು ಬಳ್ಳಾರಿ ಜಿಲ್ಲೆಯ ಶಿರುಗುಪ್ಪ, ನಂತರ ಹರಪನಹಳ್ಳಿಗೆ ತಾಲೂಕು ಪಶುವೈದ್ಯರಾಗಿ ನೇಮಿಸಲಾಯಿತು.

ನನ್ನ ಮದುವೆಗೆ ಅನೇಕ ಕಡೆಗಳಿಂದ ಆಫರ್‌ಗಳು ಬರುತ್ತಿದ್ದವು. ಈ ನಡುವೆ ನನ್ನ ಪೂಜ್ಯ ತಂದೆಯವರು ದೈವಾಧೀನರಾದರು. ಅದು ೧೯೬೨ ಮಾರ್ಚ್ ತಿಂಗಳಿರಬಹುದು. ನಾನು ಮದುವೆಯಾಗಬೇಕೆಂದು ಮನೆಯವರು ಅಗ್ರಹಿಸುತ್ತಿದ್ದರು.



ಎಚ್. ದೇವೀರಪ್ಪನವರು ತಮ್ಮ ಹಿರಿಮಗಳಿಗೆ ವರನ್ವೇಷಣೆಗಾ ಶಿವಮೊಗ್ಗದಲ್ಲಿರುವ ತಮ್ಮ ಸ್ನೇಹಿತರಾದ ಎಸ್. ತೀರ್ಥಪ್ಪ ವಕೀಲರು, ಎಚ್ ರಾಜಣ್ಣ ತಮ್ಮ ಪರಮಾಪ್ತ ಮಿತ್ರ ಹಾಗೂ ಹೊಳೆಯಪ್ಪಗೌಡರು ಮುಂತಾದವರೊಡ ಸಮಾಲೋಚನೆ ನಡೆಸಿದ್ದರಂತೆ. ಆಗ ನನ್ನ ಪ್ರಸ್ತಾಪವೂ ಬಂದಿದೆ. ನನ್ನ ಅಣ್ಣ ಶ್ರೀ ಹಾಲಪ್ಪ ಮತ್ತು ಸೋದರಮಾವ ಹುಡೇದ ಬಸಪ್ಪ ಇವರ ಒಪ್ಪಿಗೆಯೊಂದಿಗೆ ನನ್ನನ್ನು ಕರೆದುಕೊಂಡು ಹೋದರು. ಹುಡುಗಿ ಗೀತಾ ಬಿ.ಎ. ಉತ್ತಮ ದರ್ಜೆಯಲ್ಲಿ ಪಾಸಾದವರು, ಹಾಗೂ ಒಂದು ವರ್ಷ ಎಂ.ಎ. ಮಾಡಿದ್ದರು. ಕನ್ಯೆಯನ್ನು ನೋಡಿದ್ದಾಯಿತು. ಅವರ ಮನೆತನ ಸುಸಂಸ್ಕೃತ ವಾತಾವರಣ, ಸಜ್ಜನರು, ವಿದ್ಯಾವಂತ ಕುಟುಂಬ, ಇದೆಲ್ಲಾ ಮೆಚ್ಚುಗೆಯಾಗಿ ಹುಡುಗಿ ಒಪ್ಪಿಗೆಯಾಗಿ ೧೯೬೨ರ ಏಪ್ರಿಲ್ ಅಥವಾ ಮೇ ತಿಂಗಳು ಇರಬಹುದು. ಕನ್ಯೆ ನೋಡಲು ಹೋದವನು ಹಾಗೇ ಹಿರಿಯ ಮೇಲೆ ಭರವಸೆ, ವಿಶ್ವಾಸ, ಆದರ ಇಟ್ಟು, ನಿಶ್ಚಯಕಾರ್ಯನೂ ಮುಗಿಸಿಕೊಂಡು ಹೊಳೆಯಪ್ಪಗೌಡರೊಂದಿಗೆ ಊರಿಗೆ ಬಂದೆ.

ನಮ್ಮ ಮಾವನವರಾದ ಶ್ರೀ ಎಚ್. ದೇವೀರಪ್ಪನವರು ಶ್ರೀ ಎಸ್. ತೀರ್ಥಪ್ಪ, ಎಚ್. ರಾಜಣ್ಣ ಇವರೊಂದಿಗೆ ನಮ್ಮೂರಿಗೆ ನಮ್ಮ ಮನೆ ಸ್ಥಿತಿಗತಿ ತಿಳಿದುಕೊಳ್ಳಲು ಪದ್ಧತಿಯಂತೆ ೧೯೬೨ ಮೇ ತಿಂಗಳಲ್ಲಿ ಭೇಟಿ ನೀಡಿದ್ದರು. ತುಂಗಭದ್ರ ನದಿ ನೋಡಿ ಸಂತೋಷಪಟ್ಟರು. ಅವರ ಭೇಟಿಯಿಂದ ನಮ್ಮವರೆಲ್ಲಾ ಸಂತೋಷ ಪಟ್ಟರು ಹಾಗೂ ನಾವು ಧನ್ಯರಾದೆವು. ಮದುವೆ ೧೯೬೨ರ ಜೂನ್ ತಿಂಗಳಲ್ಲಿ ಮೈಸೂರು ತೆರಳಬಾಳು ಮಂಟಪದಲ್ಲಿ ನೆರವೇರಿತು. ಹೀಗೆ ದೈವ ಕೂಡಿ ಬಂತು. ಎಚ್. ದೇವೀರಪ್ಪನವರು ನನ್ನ ಮಾವಂದಿರಾದರು.

ಪದ್ಧತಿಯಂತೆ ಮದುವೆಯಾದ ನಂತರ, ಮನೆತುಂಬಿಸಿಕೊಳ್ಳುವ ಕಾರ್ಯಕ್ರಮವೂ ಆಯಿತು. ಈ ಕಾರ್ಯಕ್ಕೆ ಸ್ವತಃ ನಮ್ಮ ಮಾವನವರೂ ಹಾಗೂ ಮಗ ಶ್ರೀ ನಾಗೇಶ್ ನಮ್ಮೂರಿಗೆ ಬಂದಿದ್ದರು. ಇದೇ ಸಂದರ್ಭದಲ್ಲಿ ಅಂದರೆ ಮನೆ ತುಂಬಿಸಿಕೊಳ್ಳು ದಿನ, ನನ್ನ ತಮ್ಮ ಶ್ರೀ ಹನುಮಂತಪ್ಪನವರ ಮದುವೆ ನಾಗಮ್ಮನೊಂದಿಗೆ ಮದು ಮುಹೂರ್ತ ಕಾರ್ಯವೂ ಇತ್ತು. ಮಾವನವರು ದಂಪತಿಗಳಿಗೆ ಹರಸಿದರು. ಹೀ ಮದುವೆಗೆ ಸಂಬಂಧಪಟ್ಟ, ಎಲ್ಲಾ ಕಾರ್ಯಕ್ರಮಗಳೂ ಸರಳವಾಗಿ ನೆರವೇರಿದ್ದು ಮದುವೆ ಸಮಯದಲ್ಲಿ ನಾನು ಹರಪನಹಳ್ಳಿಯಲ್ಲಿ ಪಶುವೈದ್ಯನಾಗಿ ಕೆಲಸ ಮಾಡುತ್ತಿದ್ದೆ. ಮದುವೆಯಾದ ಸುಮಾರು ೧ ವಾರದ ನಂತರ ಮಗಳನ್ನು ನನ್ನೊಂದಿ ಹರಪನಹಳ್ಳಿಗೆ ಕಳಿಸಿದರು. ಹರಪನಹಳ್ಳಿ ಪಶುವೈದ್ಯ ಆಸ್ಪತ್ರೆಗೆ ಸರ್ಕಾರಿ ವಸತಿಗೃ

(Quarters) ಇತ್ತು. ಅಲ್ಲಿ ನಾವು ಮೊದಲ ಸಂಸಾರ ಹೂಡಿದ್ದೆವು. ಮಾವನ
ಒಮ್ಮೆ ನಾವಿದ್ದ ಊರಿಗೆ (ಹರಪನಹಳ್ಳಿ) ಬಂದಿದ್ದರು. ೧೯೬೩ ರಲ್ಲಿ ಇಲ್
ಹತ್ತಿರವಿರುವ ಪುರಾತನ ದೇವಸ್ಥಾನ, ಬಾಗಳಿಗೆ ಚಾಲುಕ್ಯರು ಕಟ್ಟಿಸಿದ್ದ ಕಲ್ಲೇಶ
ದೇವಸ್ಥಾನಕ್ಕೆ ಭೇಟಿ ನೀಡಿದ್ದರು. ಇದರ ಇತಿಹಾಸ ಕಲೆಹಾಕಿದ್ದರು. ಅವರು ಎ
ಹೋದರೂ ಆ ಸ್ಥಳದ ಇತಿಹಾಸ, ಸ್ಥಳದ ಪ್ರಾಮುಖ್ಯತೆ, ಏನಾದರೂ ಅಂ
ಸ್ಥಳಗಳಲ್ಲಿ ಓಲೆಗರಿಗಳಿದ್ದರೆ, ಅವುಗಳನ್ನು ಪಡೆದು ಅಧ್ಯಯನ ನಡೆಸುತ್ತಿದ್ದರು

ಹೊನ್ನಾಳಿಯಲ್ಲಿದ್ದಾಗ (೧೯೬೩-೬೬) ಅವರ ಊರಾದ ಮಲ್ಲಿಗೇನಹಳ್ಳಿ, ಮ
ತೀರ್ಥರಾಮೇಶ್ವರಕ್ಕೆ ನಮ್ಮನ್ನೆಲ್ಲಾ ಆಗಾಗ್ಗೆ ಕರೆದುಕೊಂಡು ಹೋಗುತ್ತಿದ್ದರು. ಅ
ಅವರ ತಾಯಿ ಇದ್ದರು (೧೯೬೪-೬೫) ಆಗಲೇ ನಾವು ಹಕ್ಕಿಕಟ್ಟಿ, ಮನೆ ನೋಡಿ
ಬೆಳಗುತ್ತಿ ಮಲ್ಲಿಗೇನಹಳ್ಳಿ, ನ್ಯಾಮತಿ ಪ್ರದೇಶದಲ್ಲಿ ಚಳಿಗಾಲದಲ್ಲಿ ಕಡಲೆ, ಮೆಂ
ಬೆಳೆ ಪ್ರಸಿದ್ಧಿ. ಮಾವನವರು ಹಸಿಕಡಲೆ, ಹಾಗೂ ಮೆಂತ್ಯಸೊಪ್ಪು ತರಿಸಿ ತಿನ್ನುತ್ತಿದ್ದ
ಊರಿಗೆ ಹೋದಾಗಲೆಲ್ಲಾ ಗೋಧಿ ಹುಗ್ಗಿ, ಬಿಳಿ ಜೋಳದರೊಟ್ಟಿ ಇಷ್ಟಪಡುತ್ತಿದ್ದ

೧೯೬೬ ರಿಂದ ೧೯೭೧ ರವರೆಗೆ ಶಿಕಾರಿಪುರದಲ್ಲಿದ್ದಾಗಲೂ ಅಲ್ಲಿಗೆ ಭೇ
ನೀಡಿದ್ದರು. ಶಿಕಾರಿಪುರ ತಾಲೂಕಿನಲ್ಲಿರುವ ಪುರಾತನ ದೇವಸ್ಥಾನಗಳು ಉಡು
ಅಕ್ಕಮಹಾದೇವಿ ಇದ್ದ ಜಾಗ, ಅಲ್ಲಿಯ ಕೋಟೆ, ಶಿರಾಳಕೊಪ್ಪದ ಹತ್ತಿರವಿರ
ಬ್ಯಾಡಕೇಳಿ ಪ್ರಭುದೇವರು ಹುಟ್ಟಿದ ಜಾಗ, ಬಳ್ಳಿಗಾವೆ ಪುರಾತನ ದೇವಸ್ಥಾನ ಮುಂತ
ಸ್ಥಳಗಳಿಗೆ ಭೇಟಿ ನೀಡಿದ್ದರು. ಆಯಾಯ ಸ್ಥಳಗಳ ತಿಂಡಿ ಊಟವನ
ಇಷ್ಟಪಡುತ್ತಿದ್ದರು.

೧೯೭೧ರಲ್ಲಿ ವಿಜಯನಗರದಲ್ಲಿ ಈಗಿನ ಮನೆ ಕಟ್ಟಿಸಿದರು. ಹೆಸರು ಹರಿಶ
ಅವರು ಮನೆ ಕಟ್ಟಿಸುವ ಸಂದರ್ಭದಲ್ಲಿ (೧೯೭೧) ನಮ್ಮ ಸಂಸಾರ, ನನ್ನ ಷಡ್ಡ
ಎಚ್.ಎಂ. ನಾಗಭೂಷಣ ಗೌಡರು ಹಾಗೂ ಮಾವನವರ ಸಂಸಾರ, ಎಲ್ಲರೂ ಒ
ಒಂದೇ ಬಾಡಿಗೆ ಮನೆಯಲ್ಲಿ ವಾಸವಿದ್ದೆವು. (ಆಗ ಗೀತಾ ನನ್ನ ಪತ್ನಿ ಬಿ.ಎ
ಬೆಂಗಳೂರಲ್ಲಿ ಓದುತ್ತಿದ್ದರು). ಅವರ ಪ್ರೀತಿ ವಿಶ್ವಾಸ, ತಮ್ಮಲ್ಲಿದ್ದ ಆ
ಮರೆಯಲಾರದ ಸಂದರ್ಭಗಳು.

ನಮ್ಮ ಮಾವನವರಿಗೆ ನಾನು ಹೆಚ್ಚಿನ ವಿದ್ಯಾಭ್ಯಾಸ ಮಾಡುವುದು ಇಷ್ಟವಿ
ಅದರಂತೆ ೧೯೬೮-೬೯ರಲ್ಲಿ ನನ್ನನ್ನು ಉನ್ನತ ವ್ಯಾಸಂಗಕ್ಕೆ ಭಾರತೀ
ಪಶುವೈದ್ಯಕೀಯ ಸಂಸ್ಥೆ (Indian Veterinary Research Institute) ಇಜ

ನಗರ-ಬರೇಲಿಗೆ NDPVM ಎಂಬ Post Graduate Diploma ಕೋರ್ಸಿಗೆ ಕರ್ನಾಟಕ ಸರ್ಕಾರದಿಂದ ಕಳಿಸಲು ಏರ್ಪಾಡಾಯಿತು. ಇದು ಮುಗಿದ ಮೇಲೆ ಭಾರತೀಯ ಹೈನುಗಾರಿಕೆ ಸಂಸ್ಥೆ (National Dairy Research institute) ಕರ್ನಾಲ್, ಹರಿಯಾಣ ಸ್ಟೇಟ್ ಇಲ್ಲಿಗೆ M.Sc., (Dairying) ಓದಲು ಕರ್ನಾಟಕ ಸರ್ಕಾರದಿಂದ ಕಳಿಸಿದರು (೧೯೬೯-೭೧). ೧೯೭೧ ಜೂನ್‌ನಲ್ಲಿ ಈ ಕೋರ್ಸ್ ಮುಗಿಸಲಾಯಿತು. ನಂತರ ೧೯೭೧ ಜೂನ್‌ನಲ್ಲಿ ಬೆಂಗಳೂರು ಹೆಬ್ಬಾಳದಲ್ಲಿ ವೀರ್ಯ ಬ್ಯಾಂಕಿಗೆ ಪಶುವೈದ್ಯರಾಗಿ ನೇಮಿಸಲಾಯಿತು. ನಾನು ಉನ್ನತ ವ್ಯಾಸಂಗ ಮಾಡಲು ಅವರ ಉತ್ತೇಜನ. ಪ್ರೋತ್ಸಾಹವಿತ್ತು. ಅದರಂತೆ ನಾನು ನಡೆದುಕೊಂಡೆ.

೧೯೭೨ ರಿಂದ ೧೯೮೦ ರವರೆಗೆ ನಾವು ದಾವಣಗೆರೆಯಲ್ಲಿದ್ದಾಗ ಅತ್ತೆ ಮಾವ ಇಬ್ಬರೂ ಆಗಾಗ ಭೇಟಿ ನೀಡುತ್ತಿದ್ದರು. ಆರೋಗ್ಯ ತಪಾಸಣೆ ಮಾಡಿಸಿಕೊಂಡಿ ದ್ದುಂಟು. ದಾವಣಗೆರೆ ಅವರ ಪ್ರಿಯ ವಾಸಸ್ಥಳ. ಇಲ್ಲಿಯ ಊಟ, ತಿಂಡಿ ಇಷ್ಟಪಡುತ್ತಿದ್ದರು. ಎಲ್ಲಿ ಹೋದರೂ ಪುಸ್ತಕದ ಅಂಗಡಿಗೆ ಭೇಟಿ ನೀಡುವುದು ರೂಢಿ. ಒಮ್ಮೆ ದಾವಣಗೆರೆಯಲ್ಲಿ ತರಳಬಾಳು ಜಗದ್ಗುರು ಶ್ರೀ ಶಿವಮೂರ್ತಿ ಸ್ವಾಮಿಗಳ ಸಹಯೋಗದಲ್ಲಿ ಮಾವನವರಿಗೆ ಒಂದು ಸನ್ಮಾನವಿತ್ತು. ಇದರಲ್ಲಿ ಶ್ರೀ ಸಿದ್ಧಗಂಗ ಮಠದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಸ್ವಾಮಿಗಳು ಮಾವನವರಿಗೆ ಸನ್ಮಾನ ಮಾಡಿ ಆಶೀರ್ವದಿಸಿದರು. ಅವರ ಕೃತಿಗಳ ಬಗ್ಗೆ ಶ್ಲಾಘಿಸಿದರು.

ದಾವಣಗೆರೆಯಲ್ಲಿರುವಾಗಲೇ ನಮ್ಮ ಹಿರಿಯ ಮಗಳು ನಳಿನಿ ಬಿ.ಇ. ಆದ ಮೇಲೆ ಅವಳ ಮದುವೆ (೩೧.೭.೧೯೭೮) ಡಾ. ತಿಮ್ಮಪ್ಪ ಅನಕೊಂಡ ಇವರೊಂದಿಗೆ ನೆರವೇರಿತು. ಆ ಸಮಯದಲ್ಲಿ ಮಗ ಶ್ರೀ ನಾಗೇಶ್ ಸಹ ಇಲ್ಲಿ ಕೆ.ಇ.ಬಿ. ಯಲ್ಲಿ ಇಂಜಿನಿಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದರು. ಮಗಳ ಮದುವೆಗೆ ಮಾವ, ಅತ್ತೆ, ಹಾಗೂ ಬೆಂಗಳೂರಿನಿಂದ ಅವರ ಷಡ್ಡರವರು ಶ್ರೀ ಬಿ.ಜಿ. ಶಂಕರರಾಯರು, ತುಂಗಪ್ಪನವರು, ಜೆ. ಬಸಪ್ಪನವರೂ ಹಾಗೂ ಭಾವ ಮೈದುನ ಬಿ. ಶಿವಪ್ರಸಾದ್ ಅವರ ಮಡದಿ ಮಕ್ಕಳೊಂದಿಗೆ ಬಂದು, ಮಗಳು-ನಳಿನಿ, ಅಳಿಯ ಡಾ. ತಿಮ್ಮಪ್ಪ ಅನಕೊಂಡ (ಮೆಳ್ಳೆಕಟ್ಟೆ) ಇವರಿಗೆ ಆಶೀರ್ವದಿಸಿ ಶುಭ ಕೋರಿದರು.

ಬಹುಶಃ ಅವರ ಕೊನೆಯ ಪ್ರಯಾಣ ಬೆಂಗಳೂರಿಂದ ೧೯೮೮ರ ಜನವರಿ ಎಂದು ಕಾಣುತ್ತದೆ. ಬೆಂಗಳೂರಿಂದ ಅವರ ಮೊಮ್ಮಗ ಶಶಿಧರ, ಕಾರಿನಲ್ಲಿ ತನ್ನ ಅಜ್ಜಿ ತಾತ

ಅವರನ್ನು ಕರೆದುಕೊಂಡು ಬಂದು ಮಧ್ಯೆ ಚಿತ್ರದುರ್ಗ (ಆಗ ನಾನು ಚಿತ್ರದುರ್ಗದಲ್ಲಿ ಕೆಲಸ ನಿರ್ವಹಿಸುತ್ತಿದ್ದೆ)ದಲ್ಲಿ ನನ್ನನ್ನು ಹತ್ತಿಸಿಕೊಂಡು ದಾವಣಗೆರೆಗೆ ಕರೆತಂದ. ಅದು ಸುಮಾರು ಅವರು ಸಾಯುವ ೪-೫ ದಿನದ ಮುಂಚೆ, ಬೆಂಗಳೂರಿಂದ ಬಂದಾಗಲೇ ಅವರು ತುಂಬಾ ಸುಸ್ತಾಗಿದ್ದರು. ನಮ್ಮ ಮನೆಯಲ್ಲಿ ತಂಗಿದ್ದರು. ಪ್ರಯಾಣದ ಆಯಾಸದಿಂದ ಸುಧಾರಿಸಿಕೊಂಡಿದ್ದರು.

ಬೆಂಗಳೂರಿಂದ ಬಂದ ಎರಡನೇ ದಿನ ನಮ್ಮನೆಯಿಂದ ಸುಮಾರು ೧ ಕಿ.ಮೀ. ದೂರವಿರುವ ಅವರ ಮಗ ಶ್ರೀ ನಾಗೇಶನ ಮನೆಗೆ (ಬಹುಶಃ ೨-೧-೮೮) ನಡೆದುಕೊಂಡೇ ಹೋದರು. ಹಾಗೂ ಆ ದಿನ ಅಲ್ಲೇ ತಂಗಿದ್ದರು. ೩-೧-೧೯೮೮ರ ಬೆಳಗಿನ ಜಾವ ಎದೆ ನೋವು ಕಾಣಿಸಿತು. ಇದಕ್ಕೂ ಮುಂಚೆ ಮನೆಯಲ್ಲೇ ಒಬ್ಬ ವೈದ್ಯರು ಚಿಕಿತ್ಸೆ ಮಾಡುತ್ತಿದ್ದರು. ಅವರ ಸಲಹೆ ಮೇರೆಗೆ ಅವರನ್ನು ದಾವಣಗೆರೆ ಚಿಗಟೇರಿ ಜನರಲ್ ಆಸ್ಪತ್ರೆಗೆ ಕರೆದುಕೊಂಡು ಹೋದೆವು. ಮನೆ ಒಂದನೇ ಅಂತಸ್ತಿನಲ್ಲಿದ್ದುದರಿಂದ ಕುರ್ಚಿ ಮೇಲೆ ಕೂರಿಸಿ ಕೆಳಗಿಳಿಸಿ ಕಾರಿನಲ್ಲಿ ಚಿಗಟೇರಿ ಜನರಲ್ ಆಸ್ಪತ್ರೆಗೆ ಕರೆತಂದೆವು. ತಕ್ಷಣ ಡಾ. ಎಲಿಯವರು ಚಿಕಿತ್ಸೆ ಶುರು ಮಾಡಿದರು. ಏದುಸಿರು ಬಿಡುತ್ತಿದ್ದರು. ಕೊನೆ ಕ್ಷಣದಲ್ಲಿ ಬಾಯಿ ಮೂಲಕ ಉಸಿರು ಹಾಕಿದರು. ನಾನೂ ಉಸಿರು ಹಾಕಿದೆ. ಕೃತಕ ಉಸಿರಾಟಕ್ಕೆ ಗಾಳಿ ಊದಿದರು. ಪ್ರಯೋಜನವಾಗಲಿಲ್ಲ. ಕೊನೆಗೆ ನೀರು ಎಂದರು. ಅತ್ತೆ ನೀರು ತಂದು ಕುಡಿಸಿದರು. ಕುಡಿದು ಕೊನೆಯುಸಿರೆಳೆದರು. ಇದು ಹಾರ್ಟ್ ಅಟ್ಯಾಕ್ ಎಂದು ಗೊತ್ತಾಯಿತು. ಮರಣ ಹೀಗೆ ಸಂಭವಿಸಿತು. ಹೀಗೆ ೩.೧.೧೯೮೮ರ ಬೆಳಿಗ್ಗೆ ಕೈಲಾಸವಾಸಿಯಾಗಿ ನಮ್ಮನ್ನೆಲ್ಲಾ ಅಗಲಿದರು.

ದಾವಣಗೆರೆಯಲ್ಲಿದ್ದಾಗ ಈಗಿರುವಷ್ಟು ವೈದ್ಯಕೀಯ ಸೌಲಭ್ಯಗಳಿರಲಿಲ್ಲ. ಬೆಂಗಳೂರಿನಲ್ಲಿದ್ದರೆ ಇತ್ತೀಚೆಗೆ ಸೌಲಭ್ಯಗಳನ್ನು ಉಪಯೋಗಿಸಿ ಇನ್ನೂ ಸ್ವಲ್ಪ ದಿವಸಗಳು ಉಳಿಸಿಕೊಳ್ಳುತ್ತಿದ್ದೆವೇನೋ.

ಶವ ಸಂಸ್ಕಾರ ಮಾರನೇ ದಿನ ೪.೧.೧೯೮೮ ರ ಮಧ್ಯಾಹ್ನ ನಡೆಯಿತು. ಶವ ನಮ್ಮ ಮನೆಗೆ ತಂದು ಶವಸಂಸ್ಕಾರದ ಎಲ್ಲಾ ಕಾರ್ಯಗಳನ್ನು ನೆರವೇರಿಸಿದೆವು. ೪.೧.೧೯೮೮ ರ ಮಧ್ಯಾಹ್ನ ಮುದೇಗೌಡಪ್ಪ ಮತ್ತು ಇತರರ ನೇತೃತ್ವದಲ್ಲಿ ದಾವಣಗೆರೆ ಮುಖ್ಯ ಬೀದಿಯಲ್ಲಿ ಶವದ ಮೆರವಣಿಗೆ ಸಹಿತ ಗಾಂಧಿನಗರ ಪ್ರದೇಶದ ವೀರಶೈವ

ರುದ್ರಭೂಮಿಯಲ್ಲಿ ಸಕಲ ಮರ‍್ಯಾದೆಯಿಂದ ಸಮಾಧಿ ಮಾಡಲಾಯಿತು. ಹಾಗೆ ಪಂಚಭೂತದಲ್ಲಿ ಶರೀರ ಲೀನವಾಯಿತು.

ಮೃತರ ಆತ್ಮಕ್ಕೆ ಶಾಂತಿ ದೊರೆಯಲೆಂದು ನಾಡಿನ ಅನೇಕ ಸಾಹಿತಿಗಳು, ಮಠಾಧೀಶರು, ಗಣ್ಯರು ಬಂಧು ಬಾಂಧವರೆಲ್ಲಾ ಸಂದೇಶ ಕಳಿಸಿದ್ದರು. ರೇಡಿಯೋ, ದೂರದರ್ಶನದಲ್ಲಿ ಪ್ರಚಾರವಾಗಿತ್ತು.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇಷ್ಟೊಂದು ಸಂಶೋಧನೆ ಮಾಡಿ ಅನೇಕ ಕಾದಂಬರಿ, ನಾಟಕ ಕಥೆಗಳನ್ನು, ಪುಸ್ತಕಗಳ ಸಂಪಾದನೆಗಳನ್ನು ಮಾಡಿದ್ದರು. ಅವರಿಗೆ ಸಲ್ಲಬೇಕಾದ ಗೌರವ ಸಿಗಲಿಲ್ಲ. ಆ ಬಗ್ಗೆ ಅವರಿಗೆ ನೋವಿತ್ತು. ಹರಿಹರ ರಾಘವಾಂಕರು ಅವರ ನೆಚ್ಚಿನ ನಾಯಕರು, ಕವಿಗಳು, ಅದಕ್ಕೆಂದೇ ಅವರ ಮನೆಗೆ 'ಹರಿಹರ'ಎಂಬ ಹೆಸರನಿಟ್ಟಿದ್ದರು.

## ೪. ತಾತ-ನಾನು ಕಂಡಂತೆ

- ಸ್ಮಿತಾ ಭೋಜನ್

'ತಾತ' ಎಂದ ಕೂಡಲೇ ನೆನಪಿಗೆ ಬರುವುದು ಅವರ ತಮಾಷೆಯ ಸ್ವಭಾವ. ನಾನು ಚಿಕ್ಕವಳಿದ್ದಾಗ ನನಗೆ 'ಕನ್ನಡ' ಕಲಿಸಲು ಗೋಡೆಯ ಮೇಲೆ ಕನ್ನಡದ ಅಕ್ಷರಮಾಲೆ ತೂಗುಹಾಕಿ ನನ್ನ ಕೈಲಿ ಕೋಲು ಕೊಟ್ಟು, ತಾವು ಕನ್ನಡದ ಅಕ್ಷರಗಳನ್ನು ತಪ್ಪುತಪ್ಪಾಗಿ ಹೇಳಿ ನನ್ನಿಂದ ಏಟು ಕೊಡಿಸಿಕೊಳ್ಳುತ್ತಿದ್ದರು. ಅವರು ನನಗೆ ಕನ್ನಡ ಹೇಳಿಕೊಟ್ಟ ರೀತಿ ಅದು ನರ್ಸರಿ, ಒಂದನೆಯ ಮತ್ತು ಎರಡನೆಯ ತರಗತಿಯನ್ನು ನಾನು ಬೆಂಗಳೂರಿನಲ್ಲಿ ಅವರ ಜೊತೆ ಇದ್ದು ಓದಿದೆ. ಬೀರೂರಿನಲ್ಲಿ ಸಹ ಅವರ ಜೊತೆ ಕೆಲವು ತಿಂಗಳುಗಳ ಕಾಲ ಇದ್ದ ನೆನಪು. ನನ್ನ ಅಕ್ಕ ಮತ್ತು ನನ್ನನ್ನು ಅವರು ಪ್ರೀತಿಯಿಂದ HH(Her highness) ಮತ್ತುBB(Brown Beauty) ಎಂದು ಕರೆಯುತ್ತಿದ್ದರು. ಮೂರನೆಯ ತರಗತಿಯಿಂದ ನಾನು ದಾವಣಗೆರೆಗೆ ಅಪ್ಪ-ಅಮ್ಮ ಮತ್ತು ಅಕ್ಕನ ಜೊತೆ ಇರಲು ಬಂದೆ. Post Cardನಲ್ಲಿ ಅವರ ಪತ್ರಗಳು ನಮ್ಮನ್ನು ಸೇರುತ್ತಿದ್ದವು. ದಸರಾ ಮತ್ತು ಬೇಸಿಗೆ ರಜೆಗೆಂದು ನಾವು ಬೆಂಗಳೂರಿಗೆ ಹೋಗುತ್ತಿದ್ದೆವು. ಆಗ ಅವರ ಸಾಹಿತ್ಯ ಕೆಲಸಕ್ಕೆ ಆಗಾಗ Proof-reading'ಗೆ ಕರೆಯುತ್ತಿದ್ದದ್ದು ಇನ್ನೂ ನೆನಪಿದೆ. ಆಗಿನ ಕಾಲದಲ್ಲಿ ಒಂದು ಪುಸ್ತಕ ಪ್ರಕಟಣೆ ಮಾಡುವುದು (ಯಾವುದೇ ಭಾಷೆಯಲ್ಲಾಗಲಿ) ಎಷ್ಟೊಂದು ಕಷ್ಟವಾಗಿತ್ತು ಎಂದು ಈಗ ಅನಿಸುತ್ತದೆ. ಒಮ್ಮೆ ತಾತ ದಾವಣಗೆರೆಗೆ ಬಂದಾಗ ನಾವೆಲ್ಲ ಒಟ್ಟಿಗೆ ಅವರೇ ಬರೆದ ಕಾದಂಬರಿ 'ಬೆಳುವಲದ ಮಡಿಲಲ್ಲಿ' ಚಲನಚಿತ್ರ ನೋಡಲು ಹೋಗಿದ್ದೆವು. ಅವರೇ ಬರೆದ ಸಂಭಾಷಣೆ 'ರಾಜೇಶ್' ಮತ್ತು 'ಕಲ್ಪನ' ಅವರ ಮನೋಜ್ಞ ಅಭಿನಯ ಅವರ ಕಣ್ಣಲ್ಲಿ ನೀರು ತರಿಸಿತ್ತು. ದಾವಣಗೆರೆಗೆ ಬಂದಾಗಲೆಲ್ಲ 'ಮಂಡಿಪೇಟೆ'ಯ ಪುಸ್ತಕದ ಅಂಗಡಿಗೆ ಹೋಗಿ ಕನ್ನಡ ಸಣ್ಣ-ಸಣ್ಣ ಪುಸ್ತಕಗಳನ್ನು ತಂದು ಅವರು ಓದಿ ನಮಗೂ ಓದಲು ಕೊಡುತ್ತಿದ್ದರು. ಅವರಿಗೆ ಸಕ್ಕರೆ ಖಾಯಿಲೆ ಮತ್ತು ಅಸ್ತಮಾ ಇಲ್ಲದಿದ್ದರೆ ಇನ್ನೂ ಹೆಚ್ಚು ಕಾಲ ಬದುಕಿ, ಹೆಚ್ಚಿನ ಸಾಹಿತ್ಯ ಸೇವೆ ಮಾಡಿರುತ್ತಿದ್ದ ರೇನೋ....ಅಷ್ಟು ಉತ್ಸಾಹ ಅವರಲ್ಲಿ ಖಂಡಿತಾ ಇತ್ತು. ಆದರೆ ಎಲ್ಲ ದೇವರಿಚ್ಛೆ! ೦೪-೦೧-೯೮ರ ರಂದು ತಾತ ನಮ್ಮನೆಲ್ಲ ಬಿಟ್ಟು ಅಗಲಿದರು. ನಾನು ಕಂಡಂತೆ ನಮ್ಮ ತಾತ ತುಂಬಾ ಸಿಂಪಲ್ ಹಾಗೂ ನೇರ ನಡೆ-ನುಡಿಯ ವ್ಯಕ್ತಿ. ಈಗಿನ ದುಬಾರಿ ಕಾಲದಲ್ಲಿ ಗಂಡ

ಹೆಂಡತಿ ಇಬ್ಬರೂ ದುಡಿದೂ ಒಂದು ಮಗುವನ್ನು ಸಾಕಲು ಕಷ್ಟ ಪಡುತ್ತಿರುವುದನ್ನು ನೋಡಿದರೆ ಅವರು ಆಗಿನ ಕಾಲದಲ್ಲಿ ಮೂರು ಹೆಣ್ಣು ಮಕ್ಕಳನ್ನು ಹಾಗೂ ಒಬ್ಬ ಮಗನನ್ನು ಅವರ ಒಬ್ಬರದೇ ದುಡಿಮೆಯಲ್ಲಿ ವಿದ್ಯಾವಂತರನ್ನಾಗಿ ಮಾಡಿರುವುದು ಹೆಚ್ಚಿನಸದೇ ಸರಿ. ಅವರಿಂದ ನಾನು ಜೀವನದಲ್ಲಿ ತುಂಬಾ ಕಲಿತಿದ್ದೇನೆ.

## ದೇವೀರಪ್ಪನವರ ಬಗ್ಗೆ ಹಿರಿಯರ, ವಿದ್ವಾಂಸರ ಅಭಿಪ್ರಾಯಗಳು

'ಸಾರ್ವಜನಿಕ ಸ್ಮರಣಶಕ್ತಿ ತುಂಬಾ ದುರ್ಬಲ' ಎನ್ನುವ ನುಡಿಗಟ್ಟು ಆಂಗ್ಲ ಭಾಷೆಯಲ್ಲಿದೆ. ನಾಡು ನುಡಿಗೆ ಮತ್ತು ನಮ್ಮ ಬದುಕಿಗೆ ವಿವಿಧ ರೀತಿಯಲ್ಲಿ ನೆರವು ನೀಡಿದ ಜನರನ್ನು ಬಹುಬೇಗ ಮರೆಯುವ ಗುಣ ಜನರಲ್ಲಿದೆ. ಅಂತೆಯೇ ಅಪರೂಪದ ಸಾಹಿತಿ, ಸಂಶೋಧಕ, ಕಾದಂಬರಿಕಾರ ಎಚ್. ದೇವೀರಪ್ಪನವರನ್ನು ಸಹ ಜನರು ಮರೆತಿರುವುದರಲ್ಲಿ ಆಶ್ಚರ್ಯವಿಲ್ಲ. ಶ್ರೀದೇವೀರಪ್ಪ ನವರ ವ್ಯಕ್ತಿತ್ವ ತುಂಬಾ ರೋಚಕವಾದುದು. ಅವರನ್ನು ಹಲವು ಸಲ ಹತ್ತಿರದಿಂದ ಮಾತನಾಡಿಸಿ ಅವರ ಜೊತೆ ಚರ್ಚಿಸಿದ ನೆನಪುಗಳು ನಮ್ಮ ಮನದಾಳದಲ್ಲಿ ಈಗಲೂ ಹಸಿರಾಗಿವೆ. ಅವರು ತುಂಬಾ ಸಾತ್ವಿಕ ಸ್ವಭಾವದ ಸಜ್ಜನಿಕೆಯ ವ್ಯಕ್ತಿ, ಅವರೆಂದೂ ಪ್ರಶಸ್ತಿ ಪುರಸ್ಕಾರಗಳಿಗೆ ಹಾತೊರೆದವರಲ್ಲ. 'ಕಾರ್ಯವೇ ಕೈಲಾಸ' ವೆಂದು ನಂಬಿ ಸಾಹಿತ್ಯ ಕೃಷಿಯ ಕಾಯಕದಲ್ಲೇ ಸಂತೋಷ ಅನುಭವಿಸಿದವರು. ಶ್ರೀ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳ ಪರಮ ಭಕ್ತರಾಗಿ ಮಠದ ಸೇವೆ ಸಲ್ಲಿಸಿದವರು. ಈ ದೃಷ್ಟಿಯಿಂದಲಾದರೂ. ನಾವು ಮತ್ತೆ ಮತ್ತೆ ದೇವೀರಪ್ಪನವರನ್ನು ನೆನಪಿಸಿಕೊಳ್ಳಬೇಕಾಗಿದೆ.

- ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು

ಶ್ರೀದೇವೀರಪ್ಪನವರು ನನಗೆ ಸೌಜನ್ಯ, ವಿದ್ವತ್ತು, ಸ್ನೇಹಪರತೆ, ಆತಿಥ್ಯಗಳಲ್ಲಿ ಎಲ್ಲ ಅರ್ಥಗಳಲ್ಲೂ ಒಂದು ಮಾದರಿ.

- ಡಾ.ಎಂ. ಚಿದಾನಂದಮೂರ್ತಿ

ಇಪ್ಪತ್ತನೆಯ ಶತಮಾನದ ನವೋದಯ ಸಾಹಿತಿಗಳ ಸಾಲಿನಲ್ಲಿ ದೇವೀರಪ್ಪ ನವರು ಪ್ರಮುಖರಾದವರು. ಭಾವುಕ ಜೀವಿಗಳಾದ ಶ್ರೀಯುತರು ಎಲೆಮರೆಯ

ಕಾಯಿಯಂತೆ ನಿಸ್ವಾರ್ಥದಿಂದ ಸಾಹಿತ್ಯ ಸೇವೆಗೈದ ಮಹನೀಯರು. ಲೌಕಿಕ ಲಾಭಲೋಭಗಳಿಗೆ ಮರುಳಾಗದೆ ನಿಷ್ಕಾಮ ದೃಷ್ಟಿಯಿಂದ ದುಡಿದ ಕಾಯಕ ಕಲಿಗಳು

- ಎಸ್. ಬಸವರಾಧ್ಯ

ನಾನು ಅವರಲ್ಲಿ ಓರ್ವ ಸಹೃದಯ, ಸಜ್ಜನ ವಿದ್ವಾಂಸನನ್ನು ಕಾಣುವೆನು. ಅಂಥವರು ಈಗ ಅಪರೂಪವಾಗುತ್ತಿರುವರು. ನೂರು ವರ್ಷಗಳ ಈ ದೀರ್ಘಾವಧಿಯಲ್ಲಿ ಅವರನ್ನು ನೆನೆಯುವುದು ಸಂತೋಷದ ಸಂಗತಿ

- ಡಾ.ಎಸ್. ವಿದ್ಯಾಶಂಕರ

ಮಲ್ಲಿಗೇನಹಳ್ಳಿಯಿಂದ ಬಂದ ಈ ಸಾಹಸಿ ವಿದ್ವತ್ ಪ್ರಪಂಚದಲ್ಲಿ ಮನೆ ಮಾತಾಗಿದ್ದಾರೆ. ತಮ್ಮ ನಿರಕ್ಷರ ಕುಕ್ಷಿ ತಂದೆ ತಾಯಿಯರ ಸಾಂಸ್ಕೃತಿಕ ಮೌಲ್ಯವನ್ನು ಎತ್ತಿ ಹಿಡಿದು ಮನೆತನಕ್ಕೂ, ಊರಿಗೂ ಕೀರ್ತಿ ತಂದಿದ್ದಾರೆ. ಯಾವ ಪದವಿ ಪ್ರಶಸ್ತಿಗಳಿಗೆ ಆಸೆ ಪಡದೆ, ಕಾನನದ ಮಲ್ಲಿಗೆ ಹೂವಿನಂತೆ ಸುಮಧುರ ಪರಿಮಳವನ್ನು ಬೀರಿ ತಮ್ಮ ಸುತ್ತಲ ಸಮಾಜದ ಸ್ವಾಸ್ಥ್ಯ ಕೆಡದಂತೆ ನೋಡಿ ಕೊಂಡಿದ್ದಾರೆ. ಇಂಥ ಸುಸಂಸ್ಕೃತರನ್ನು ತಾನೆ ನಾವೆಲ್ಲಾ ಜಂಟಲ್‌ಮ್ಯಾನ್ ಎಂದು ಕರೆಯುವುದು.

- ಪ್ರೊ.ಎಚ್.ಎಸ್. ಹರಿಶಂಕರ್

ಲಿಂ. ಎಚ್. ದೇವೀರಪ್ಪನವರು ನಮ್ಮ ನಾಡಿನ ಶ್ರೇಷ್ಠ ವಿದ್ವಾಂಸರು, ಗ್ರಂಥ ಸಂಪಾದನಾ ಶಾಸ್ತ್ರ ಬಲ್ಲವರು. ಕನ್ನಡದ ಪ್ರಾತಃಸ್ಮರಣೀಯ ವಿದ್ವಾಂಸರಾದ ಬಿ.ಎಲ್.ಎಸ್. ತೀನಂಶ್ರೀ, ಕುವೆಂಪು, ರಾಘವಾಚಾರ್, ವೆಂಕಣ್ಣಯ್ಯ, ಕೃಷ್ಣ ಶಾಸ್ತ್ರಿಗಳೇ ಮೊದಲಾದವರ ಶ್ರೇಣಿಗೆ ಸೇರಿದ ಅಪರೂಪದವರು. ಅವರು ಅಧ್ಯಯನದ ಶಿಸ್ತು, ತಲಸ್ಪರ್ಶಿಯಾದ ಸಂಶೋಧನೆ, ನಿಶಿತ ವಿಮರ್ಶಾ ಬುದ್ಧಿ, ನಿಖರವಾದ ಅಭಿವ್ಯಕ್ತಿಗಳನ್ನು ಮೈಗೂಡಿಸಿಕೊಂಡಿದ್ದರು. ಈಚೆಗೆ ಅಪರೂಪವಾಗುತ್ತಿರುವ ಸಂಶೋಧನಾ ಶಕ್ತಿ ಹಾಗೂ ಸಮತೂಕದ ವಿಮರ್ಶಾ ಸಾಮರ್ಥ್ಯಕ್ಕೆ ಅವರ ಕೃತಿಗಳು ಬೆಳಕಿನ ಕಂಬಗಳಂತಿದ್ದು ಮಾರ್ಗದರ್ಶಕಗಳಾಗಿವೆ.

- ಟಿ.ಆರ್. ಮಹಾದೇವಯ್ಯ

ಶ್ರೀ ದೇವೀರಪ್ಪನವರು ಏಕಾಂತ ಪ್ರಿಯರು. ಸೇವೆ ಏಕಾಂತ ಆದರ ಫಲ ಲೋಕಾಂತ ಅನ್ನುವಂತೆ ತಾವೊಬ್ಬರೇ ಸೇವೆ ಸಲ್ಲಿಸಿದರೂ ಅದರ ಫಲಮಾತ್ರ ಲೋಕಕ್ಕೆ, ನಾಡಿಗೆ, ಜನತೆಗೆ.

- ಹೀ.ಚಿ. ಶಾಂತವೀರಯ್ಯ

ಎಪ್ಪತ್ತೈದು ವರ್ಷಗಳ ಸಾರ್ಥಕ ಬದುಕು ಅವರದ್ದು. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದರಲ್ಲಿಯೂ ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಅವರ ಹೆಸರು ನಿರಂತರ ಪ್ರಜ್ವಲಿಸುವ ಜ್ಯೋತಿ. ಸರಳ, ಸಜ್ಜನ, ಹೃದಯ ಶ್ರೀಮಂತಿಕೆ ಹೊಂದಿದ್ದು ಅವರು 'ಮತಿಗೆಟ್ಟು ಅನ್ಯರ ಹೊಗಳದಂತೆ, ದೃತಿಗೆಟ್ಟು ಅನ್ಯರ ಬೇಡದ ಸಾರ್ಥಕ ಬದುಕನ್ನು ಸ್ವಾಗತಿಸಿದರು, ಇಂತಹ ಧೀಮಂತ ವ್ಯಕ್ತಿಗೆ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪಟ್ಟವಾಗಲೀ ವಿಶ್ವವಿದ್ಯಾಲಯಗಳ ಗೌರವ ಡಾಕ್ಟರೇಟ್ ಪದವಿಗಳಾಗಲಿ ದೊರಕದಿದ್ದದ್ದೂ ಅವರ ಯೋಗ್ಯತೆಯ ಕೊರತೆಯಿಂದಲ್ಲ. ಸಮಾಜದ ಸರ್ಕಾರದ ಅವಜ್ಞತೆಯಿಂದ ಎಂಬುದಂತೂ ಖಚಿತ.

- ಆರ್. ರಾಚಪ್ಪ

ಯಾವುದಕ್ಕೂ ಕೊರಗದೆ, ಯಾವುದಕ್ಕೂ ಮರುಗದೆ, ಯಾರಿಗೂ ಕೆಡಕನ್ನೂ ಬಯಸದೆ, ನಿಸ್ವಾರ್ಥ ಜೀವನವನ್ನು ಸವೆಸಿ ಪುಣ್ಯ ಪುರುಷರಾದವರು ದೇವೀರಪ್ಪನವರು. 'ಸಾಹಿತ್ಯ ಪ್ರಪಂಚದಲ್ಲಿ ನಿಷ್ಕಾಮ ಬುದ್ಧಿಯಿಂದ ದುಡಿದು. ಲಭಿಸಿದ್ದರಲ್ಲೇ ತೃಪ್ತಿಯಿಂದ ಸೇವೆ ಮಾಡಿ ನಿಶ್ಚಿಂತೆಯಿಂದ ನಿವೃತ್ತರಾದವರು ವಿರಳ. ವಯಸ್ಸಿನ ಅಂತರವಿಲ್ಲದೆ. ಎಲ್ಲರೊಂದಿಗೆ ಬೆರೆಯಬಲ್ಲ, ವಿಚಾರ ವಿನಿಮಯ ಮಾಡಬಲ್ಲ. ಸರಳತೆಗೆ, ಸಜ್ಜನಿಕೆಗೆ ಹೆಸರಾಗಿದ್ದರು ಶ್ರೀ ಎಚ್. ದೇವೀರಪ್ಪನವರು'

- ಡಾ. ನಾ ಲೋಕೇಶ್ ಒಡೆಯರ್

ಕನ್ನಡದ ಹಿರಿಯ ತಲೆಮಾರಿನ ಗಟ್ಟಿ ವಿದ್ವಾಂಸರಲ್ಲಿ ಎಚ್. ದೇವೀರಪ್ಪನವರು ಒಬ್ಬರು. ಪಾಂಡಿತ್ಯ ಪರಂಪರೆಯ ವಿದ್ವತ್ ಪರಿಸರದಲ್ಲಿ ಬೆಳೆದು ಬಂದ ಅವರು ತಮ್ಮ ಸೃಜನಶೀಲ ಪ್ರತಿಭೆ ಮತ್ತು ಪರಿಶ್ರಮದಿಂದ ಗಳಿಸಿದ ಪ್ರಗಲ್ಭ ಪಾಂಡಿತ್ಯ ಎರಡರ ಕನ್ನಡ ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರಗಳಿಗೆ ತಮ್ಮದೇ ಆದ ಮಹತ್ವದ ಕೊಡುಗೆಯನ್ನೇ ನೀಡಿದ್ದಾರೆ.

- ಡಾ. ವೀರಣ್ಣ ರಾಜೂರ

ಸಂಶೋಧಕರಾಗಿ, ಸಂಗ್ರಹಕಾರರಾಗಿ, ಸೃಜನ ಶೀಲ ಲೇಖಕರಾಗಿ ಸಾಹಿತ್ಯ ಸೇವೆಯನ್ನು ಮಾಡಿದ ದೇವೀರಪ್ಪನವರು ಸಾಹಿತ್ಯಧರ್ಮ ವೈಚಾರಿಕತೆ ಹೀಗೆ ಹಲವು ಮನಸುಗಳಲ್ಲಿ ಸಾಹಿತ್ಯ ಸೃಷ್ಟಿ ಮಾಡಿದವರು. ಸರ್ವೋದಯದ ಆದರ್ಶ, ರಾಷ್ಟ್ರೀಯತೆ, ಭಾಷಾಭಿಮಾನ, ಗ್ರಾಮೀಣಾಭಿವೃದ್ಧಿ, ದೇಶದ ಪ್ರಗತಿ ಹೀಗೆ ಹತ್ತು ಹಲವು ಕನಸುಗಳನ್ನು ತುಂಬಿಟ್ಟುಕೊಂಡವರು. ಇಂತಹ ಮಹನೀಯರು ಹೊನ್ನಾಳಿ ಸೀಮೆಯ ಕಥನ ಸಾಹಿತ್ಯದಲ್ಲಿ ಚಾರಿತ್ರಿಕ ದಾಖಲೆಯಾಗಿದ್ದಾರೆ ಎಂದೇ ಹೇಳಬಹುದು.

- ಡಾ. ಶಿವಾನಂದ ಕೆಳಗಿನಮಾನಿ

ಖ್ಯಾತ ಸೃಜನಶೀಲ ಲೇಖಕರು, ಶ್ರೇಷ್ಠ ಹಸ್ತಪ್ರತಿ ಸಂಗ್ರಹಕಾರರು, ಸಂಪಾದನಾಕಾರರು ಹಾಗೂ ಸಂಶೋಧಕರಾದ ಎಚ್. ದೇವೀರಪ್ಪನವರು ಅಷ್ಟೇ ಉನ್ನತ ಮಟ್ಟದ ವಿಮರ್ಶಕರೂ ಹೌದು. ಹಂಪೆಯ ದೇವಕವಿ ಹರಿಹರನ ಪರಮಭಕ್ತರೂ, ವೀರಶೈವ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರೂ ಆದ ದೇವೀರಪ್ಪನವರು ಶಿವಕುಮಾರ ಪ್ರಕಾಶನವನ್ನು ಹುಟ್ಟು ಹಾಕಿದವರು. ನಡೆ ನುಡಿ ಒಂದಾದ ಶರಣರ ಬದುಕನ್ನು ತಮ್ಮ ಇಡೀ ಜೀವಮಾನದುದ್ದಕ್ಕೂ ಅನುಸರಿಸಿದ ಅವರು ಪರೋಪಕಾರ ಮನೋಭಾವ ಹೊಂದಿದಂತೆ ಸಂದರ್ಭಾನುಸಾರಿಯಾಗಿಯೂ ನ್ಯಾಯ ನಿಷ್ಠೂರಿಯಾಗಿಯೂ ಇರುತ್ತಿದ್ದರು. ಕೆಲಸದಲ್ಲಿ ಶ್ರದ್ಧೆ, ಪ್ರಾಮಾಣಿಕತೆ, ತಾಳ್ಮೆ ಹಾಗೂ ಸಹೋದ್ಯೋಗಿಗಳು ಮತ್ತು ಸಹ ವಿದ್ವಾಂಸರೊಡನೆ ಆರೋಗ್ಯ ಪೂರ್ಣ ಸಂಬಂಧ, ಸಹಭಾಗಿತ್ವಗಳು ಅವರ ಕರ್ತವ್ಯ ಮತ್ತು ವ್ಯಕ್ತಿತ್ವದ ಹಿರಿಮೆಯನ್ನೂ ಇಮ್ಮಡಿಗೊಳಿಸಿವೆ. ಅವರಲ್ಲಿ ತಾಳ್ಮೆ, ಪರಿಶ್ರಮ ಹಾಗೂ ಅಪಾರ ಶ್ರದ್ಧೆ ಬೇಡುವ ಹಸ್ತಪ್ರತಿ ಸಂಗ್ರಹ, ಸಂಪಾದನೆ, ಸಂಶೋಧನಾ ಕ್ಷೇತ್ರಗಳಲ್ಲಿ ಕೆಲಸಮಾಡಿ ಕನ್ನಡ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದ ಹಾಗೂ ವೀರಶೈವ ಸಾಹಿತ್ಯ ಭಂಡಾರವನ್ನು ಉಜ್ವಲಗೊಳಿಸಿದ ಕೀರ್ತಿ ದೇವೀರಪ್ಪನವರಿಗೆ ಸಲ್ಲುತ್ತದೆ.

- ಡಾ. ಚನ್ನೇಶ್ ಹೊನ್ನಾಳಿ

ಕೃಪೆ : 'ಬೆಳುವಲ' ಅಭಿನಂದನ ಗ್ರಂಥ

## ಎಚ್. ದೇವೀರಪ್ಪನವರ ಕೃತಿಗಳು

ಸಣ್ಣಕತೆ : ೧. ಸುವರ್ಣ ಸಂಪುಟ (೧೯೪೭) ಪ್ರ : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

ಕಾದಂಬರಿ : ೨. ಹಳ್ಳಿಯ ಬದುಕು (೧೯೪೭) ಪ್ರ : ಶ್ರೀ ಗೌರಿಶಂಕರ ಬುಕ್ ಡಿಪೋ, ಮೈಸೂರು ೧೯೫೦ (೨ನೇ ಮು), ೧೯೫೯ (೩ನೇ ಮು)

೩. ಬೆಳುವಲದ ಮಡಿಲಲ್ಲಿ (೧೯೫೩) ಪ್ರ: ಶಿವಕುಮಾರ ಪ್ರಕಾಶನ, ವಿಜಯನಗರ ಬೆಂಗಳೂರು ೧೯೫೫ (೨ನೇ ಮು), ೧೯೭೫ (೩ನೇ ಮು), ೧೯೭೬ (೪ನೇ ಮು)

ನಾಟಕ : ೪. ಕಲಾಯೋಗಿ (೧೯೫೯) ಪ್ರ : ಶ್ರೀ ಗೌರಿಶಂಕರ ಡಿಪೋ ಮೈಸೂರು ೧೯೬೩ (೨ನೇ ಮು)

೫. ತುಂಗಭದ್ರ (೧೯೬೧) ಪ್ರ : ಶ್ರೀ ಗೌರಿಶಂಕರ ಡಿಪೋ, ಮೈಸೂರು

ಪ್ರಬಂಧ : ೬. ಶಿವಶರಣೆ ಲಕ್ಕಮ್ಮ ಪ್ರ : ಕ.ವಿ.ವಿ. ಧಾರವಾಡ

೭. ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ (೧೯೭೪) ಪ್ರ : ಕ.ವಿ.ವಿ. ಧಾರವಾಡ

೮. ಕನ್ನಡ ಹಸ್ತಪ್ರತಿಗಳ ಇತಿಹಾಸ ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಸಂಶೋಧನೆ : ೯. ಸಂಶೋಧನ ಸಂಪುಟ (೧೯೮೪) ಪ್ರ : ಶಿವಕುಮಾರ ಪ್ರಕಾಶನ, ವಿಜಯನಗರ, ಬೆಂಗಳೂರು-೪೦.

ವ್ಯಕ್ತಿ ಚಿತ್ರ : ೧೦. ಮೈಸೂರು ಬಸವಯ್ಯನವರು (೧೯೮೦) (ಪುಣ್ಯ ಪುರುಷರ ಮಾಲೆ)

ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಗದಗ
ಮೈಸೂರು ಬಸವಯ್ಯನವರು (೧೯೮೫) (ವಿಸ್ತೃತ)
ಪ್ರ : ತರಳಬಾಳು ಪ್ರಕಾಶನ, ಸಿರಿಗೆರೆ-೫೭೭೫೪೧

೧೧. ಹಂಪೆಯ ಹರಿಹರ (೧೯೮೭) (ಜೀವನ-ಕೃತಿ ವಿಚಾರ)
ಪ್ರ : ಸಾಹಿತ್ಯ ಅಕಾಡೆಮಿ, ನವದೆಹಲಿ

ಸಂಪಾದಿತ : ೧೨. ಸಿಂಗಿರಾಜ ಪುರಾಣ (ವಾರ್ಧಕ ಷಟ್ಪದಿ ಕಾವ್ಯ) (೧೯೫೦)
ಪ್ರ : ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆ, ಮೈಸೂರು

೧೩. ನಂಜುಂಡ ಕವಿಯ ವಿರಚಿತ ರಾಮನಾಥ ಚರಿತೆ (ಸಂಪುಟ ೨, ಸಾಂಗತ್ಯ) ೧೯೫೯

೧೪. ನಂಜುಂಡ ಕವಿ ವಿರಚಿತ ರಾಮನಾಥ ಚರಿತೆ (ಸಂಪುಟ ೩, ಸಾಂಗತ್ಯ) ೧೯೬೪
ಪ್ರ : ಪ್ರಾಚ್ಯ ವಿದ್ಯಾಸಂಶೋಧನ ಸಂಸ್ಥೆ, ಮೈಸೂರು

೧೫. ಹಂಪೆಯ ಹರಿಹರ ದೇವರ 'ಶರಣ ಚರಿತ ಮಾನಸಂ' (೧೯೬೮)
ಪ್ರ : ಶ್ರೀ ತರಳಬಾಳು ಗ್ರಂಥಮಾಲೆ, ಸಿರಿಗೆರೆ
ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (೧೯೯೫)

೧೬. ಹಂಪೆಯ ಹರಿಹರ ವಿರಚಿತ 'ಬಸವರಾಜ ದೇವರ ರಗಳೆ' (೧೯೮೧)
ಪ್ರ : ಶಿವಕುಮಾರ ಪ್ರಕಾಶನ, ವಿಜಯನಗರ, ಬೆಂಗಳೂರು-೪೦.
೨ನೆ ಮು ೧೯೮೮, ೩ನೇ ಮು. ೨೦೦೩
ಪ್ರ : ಬಸವಸಮಿತಿ, ಬಸವ ಭವನ, ಬೆಂಗಳೂರು-೧

೧೭. ಮಹಾಕವಿ ಹರಿಹರದೇವರ ಐದು ರಗಳೆಗಳು (೧೯೬೪)
ಪ್ರ : ಶಿವಕುಮಾರ ಪ್ರಕಾಶನ, ವಿಜಯನಗರ, ಬೆಂಗಳೂರು-೪೦

೧೮. ಹಂಪೆಯ ಹರಿಹರ ದೇವರ ಎಂಟು ರಗಳೆಗಳು (೧೯೭೧)

ಪ್ರ : ಶಿವಕುಮಾರ ಪ್ರಕಾಶನ, ವಿಜಯನಗರ
ಬೆಂಗಳೂರು-೪೦

೧೯. ಮಹಾಕವಿ ಹರಹರ ದೇವರ ಮೂವರು ಪುರಾತನರ
(೧೯೬೭)
ಪ್ರ : ಶಿವಕುಮಾರ ಪ್ರಕಾಶನ, ವಿಜಯನಗರ
ಬೆಂಗಳೂರು-೪೦

೨೦. ಹಂಪೆಯ ಹರಿಹರ ವಿರಚಿತ ಮಹಾದೇವಿಯರ ರಗ
(೧೯೭೫)
ಪ್ರ : ಶಿವಕುಮಾರ ಪ್ರಕಾಶನ, ವಿಜಯನಗರ
ಬೆಂಗಳೂರು-೪೦

೨೧. ಹರಿಹರೇತರ ಕೃತ ವಿರೂಪಾಕ್ಷಾಂಕಿತ ಶಿವಶರಣ ಸಂಪು
(೧೯೭೩)
ಪ್ರ : ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾನಿಲಯ

೨೨. Vachanas of Basavanna (Edit)
ಪ್ರ : ತರಳಬಾಳು ಪ್ರಕಾಶನ, ಸಿರಿಗೆರೆ (೧೯೬೭)

೨೩. ಹಂಪೆಯ ಹರಿಹರ ದೇವನ ಇಪ್ಪತ್ತು ರಗಳೆಗಳು
(ಗದ್ಯಾನುವಾದ ಸಹಿತ)
ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಇತರರೊಡನೆ: ೨೪. ಗಿರಿಜಾಕಲ್ಯಾಣ ಮಹಾ ಪ್ರಬಂಧಂ (ಚಂಪೂಕಾವ್ಯ
೧೯೫೭. (ಡಾ. ದೇಜಗೌ ಅವರೊಡನೆ) ಪ್ರ : ಶ್ರೀ
ಗೌರಿಶಂಕರ ಡಿಪೋ ಮೈಸೂರು

೨೫. ಅಜಿತ ತೀರ್ಥಂಕರ ಪುರಾಣ ಸಂಗ್ರಹ (ಚಂಪೂಕಾವ್ಯ
೧೯೫೯. (ಡಾ. ದೇಜಗೌ ಅವರೊಡನೆ) ಪ್ರ : ಮೈವಿ

೨೬. ಜನ್ನಕವಿ ವಿರಚಿತ ಅಜಿತನಾಥ ಪುರಾಣ
(ಚಂಪೂಕಾವ್ಯ) ೧೯೭೨. (ಎಂ.ಸಿ. ಪದ್ಮನಾಭ ಶರ್ಮ
ಅವರೊಡನೆ) ಪ್ರ : ಮೈಸೂರು ವಿಶ್ವವಿದ್ಯಾನಿಲಯ

೨೭. ಜೇಡರ ದಾಸಿಮಯ್ಯನ ವಚನಗಳು (೧೯೭೪)

9

(ಆರ್. ರಾಚಪ್ಪ ಅವರೊಡನೆ) ಪ್ರ : ತರಳಬಾಳು ಪ್ರಕಾಶನ, ಸಿರಿಗೆರೆ

೨೮. ಕುಮಾರವ್ಯಾಸ ಕವಿಯ 'ಇಂದ್ರಕೀಲ' (೧೯೫೫) (ಮೇ. ರಾಜೇಶ್ವರಯ್ಯನವರೊಡನೆ) ಧಾರವಾಡ

೨೯. ಸವಿಗನ್ನಡ (ಪಾಠಮಾಲೆ ಕೇರಳದ ೧ ರಿಂದ ೧೦ನೇ ತರಗತಿ ಮಕ್ಕಳಿಗಾಗಿ ಸಿದ್ಧಪಡಿಸಿದ್ದು ಇತರರೊಡನೆ) ೧೯೬೩, ತಿರುವನಂತಪುರ.

೩೦. ವಿಶ್ವಬಂಧು ಮರುಳಸಿದ್ಧ ಹಾಗೂ ಆತನ ಪರಂಪರೆ–೧೯೭೪. (ಮಹಾದೇವ ಬಣಕಾರ ಅವರೊಡನೆ) ಪ್ರ : ತರಳಬಾಳು ಪ್ರಕಾಶನ, ಸಿರಿಗೆರೆ

೩೧. ಚನ್ನವೀರ ಜಂಗಮದೇವ ವಿರಚಿತ ಷಟ್ಸ್ಥಲವಲ್ಲಭ (ಚಂಪು) ೧೯೮೦, (ಚನ್ನಪ್ಪ ಎರೇಸೀಮೆ ಅವರೊಡನೆ)

೩೨. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು (೧೯೮೩) (ಚನ್ನಪ್ಪ ಎರೇಸೀಮೆ ಅವರೊಡನೆ)

೩೩. ಕಾವ್ಯ ಸೌಂದರ್ಯ (೧೯೭೮) (ಇತರರೊಡನೆ)

೩೪. 'ಬೆಂಗಳೂರು ತರಳಬಾಳು ಹುಣ್ಣಿಮೆ ಮಹೋತ್ಸವ ಸ್ಮರಣ ಸಂಚಿಕೆ'–೧೯೭೪ (ಮಹಾದೇವ ಬಣಕಾರ ಅವರೊಡನೆ) ಪ್ರ : ತರಳಬಾಳು ಪ್ರಕಾಶನ, ಸಿರಿಗೆರೆ.

## ಎಚ್. ದೇವೀರಪ್ಪನವರು ಮತ್ತು ಅವರ ಕೃತಿಗಳನ್ನು ಕುರಿತು

೧. 'ಮಲ್ಲಿಗೇನಹಳ್ಳಿ ಮಲ್ಲಿಗೆ' ಜೇನಹಳ್ಳಿ ಸಿದ್ಧಲಿಂಗಪ್ಪ ಕನ್ನಡ ಪ್ರಭ, ವಾಙ್ಮಯ ವಿಹಾರ, ೩೧.೧.೧೯೮೮

೨. "ಮರುಳಸಿದ್ಧ ಕಾವ್ಯ"ವನ್ನು ಬೆಳಕಿಗೆ ತಂದ ಶ್ರೀ ಎಚ್. ದೇವೀರಪ್ಪನವರ ನಿಧನ. ತರಳಬಾಳು ವಾರ್ತಾಪತ್ರ–ಫೆಬ್ರವರಿ ೧೯೮೮, ಪುಟ–೮

೩. 'ಪ್ರಸಾದ' ಸಂಪುಟ ೨೬, ಸಂಚಿಕೆ ೩ ಮೇ–ಜೂನ್ ೧೯೮೮ರ ಸಂಚಿಕೆ. ಚನ್ನಪ್ಪ ಎರೇಸೀಮೆ ಅವರ ಲೇಖನ.

೪. ಮಲ್ಲಿಗೇನಹಳ್ಳಿ ಮಲ್ಲಿಗೆ ಶ್ರೀ ಎಚ್.ದೇವೀರಪ್ಪ–ಜೇನಹಳ್ಳಿ ಸಿದ್ಧಲಿಂಗಪ್ಪ

'ಹೊನ್ನರಳಿ' : ಹೊನ್ನಾಳಿ ತಾಲ್ಲೂಕು ಮಟ್ಟದ ಮೊದಲನೆಯ ಸಾಹಿತ್ಯ ಮತ್ತು ಜಾನಪದ ಸಮ್ಮೇಳನ-೧೯೯೨ ನೆನಪಿನ ಸಂಚಿಕೆ, ಪು. ೧೫-೧೯, ಪ್ರ : ಕಸಾಪ, ಹೊನ್ನಾಳಿ

೫. ಶ್ರೀ ಎಚ್. ದೇವೀರಪ್ಪ-ಬದುಕು ಬರಹ- ಡಿ. ಶಿವರುದ್ರಪ್ಪ

'ಚಿಲುಮೆ' : ಹೊನ್ನಾಳಿ ತಾಲ್ಲೂಕು ೫ನೇ ಸಾಹಿತ್ಯ ಸಮ್ಮೇಳನ ಸಂಚಿಕೆ ೧೯೯೯. ಪು.೨೯-೩೨ ಪ್ರ : ಕಸಾಪ, ಹೊನ್ನಾಳಿ

೬ ಗ್ರಂಥ ಸಂಪಾದನೆಯ ಗಾರುಡಿಗ ಶ್ರೀ ಎಚ್. ದೇವೀರಪ್ಪನವರು- ಹೀ.ಚಿ. ಶಾಂತವೀರಯ್ಯ, 'ಹೊನ್ನತೇರು' : ಹೊನ್ನಾಳಿ ತಾಲ್ಲೂಕು ೨ನೇ ಸಾಹಿತ್ಯ ಸಮ್ಮೇಳನ ಸಂಚಿಕೆ- ೧೯೯೫, ಪು ೮-೧೧ ಪ್ರ : ಕಸಾಪ, ಹೊನ್ನಾಳಿ

೭ ಹೊನ್ನಾಳಿ ತಾಲ್ಲೂಕಿನ ಬರಹಗಾರರು ಮತ್ತು ಅವರ ಕೆಲವು ಕೃತಿಗಳು 'ಹೊನ್ನರಳಿ' ಸಂ : ಜೀನಹಳ್ಳಿ ಸಿದ್ಧಲಿಂಗಪ್ಪ, ಡಾ.ಕುರುವ ಬಸವರಾಜ. ೧೯೯೨, ಪು. ೬೬-೬೮ ಪ್ರ : ಕಸಾಪ, ಹೊನ್ನಾಳಿ

೮. ದೇವೀರಪ್ಪ ಎಚ್, ಮಲ್ಲಿಗೇನಹಳ್ಳಿ-ಡಾ. ನಾ ಕೊಟ್ರೇಶ್ ಉತ್ತಂಗಿ 'ಹೊನ್ನ ಮಣಿಗಳು' ಕೃತಿ, ೨೦೦೫ ಪು.೩೫-೩೭. ಪ್ರ : ಸಹನಾದ್ರಿ ಪ್ರಕಾಶನ, ಹೊನ್ನಾಳಿ

೯. ಶ್ರೀ ಎಚ್. ದೇವೀರಪ್ಪನವರು-ಲೇ. ಎನ್.ಬಸವಾರಾಧ್ಯ (೧೯೯೭), ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ-ಗದಗ (ವ್ಯಕ್ತಿಚಿತ್ರ ಕೃತಿ)

೧೦. 'ಬೆಳುವಲ' ಎಚ್. ದೇವೀರಪ್ಪನವರ ಅಭಿನಂದನ ಗ್ರಂಥ. ಶ್ರೀ ಎಚ್. ದೇವೀರಪ್ಪನವರ ಜನ್ಮಶತಮಾನೋತ್ಸವ ಸಮಿತಿ ಹೊನ್ನಾಳಿ (೨೦೧೩)

vvv

